ಸಮೀಕ್ಷೆಯ ಮಾಹಿತಿಯನ್ನು ಕಂಪ್ಯೂಟರಿಗೆ ಅಳವಡಿಸಿ ಕೋಷ್ಟಕಗಳನ್ನು ತಯಾರಿಸುವಲ್ಲಿ ಸಹಕರಿಸಿದ ಮಲ್ಲಿಕಾರ್ಜುನ ಮಾನ್ವಡೆ, ಆರ್ ಬಿ ಕುಮಾರ ಹಾಗೂ ಮುತ್ತಿನಂಥ ಅಕ್ಷರ ಸಂಯೋಜನೆ ಗೊಳಿಸಿದ ಕಮಲಾಪುರದ ಭಾವನಾ ಗ್ರಾಫಿಕ್ಸ್ ಶ್ರೀನಿವಾಸ ಕೆ ಕಲಾಲ್ ಅವರುಗಳಿಗೆ ಋಣಿಯಾಗಿದ್ದೇವೆ.

**ಅಪ್ಪಾಜಿ ಎಸ್ ಸಿಂಧೆ**
**ಕೆ ಚಾವಡೆ ಲೋಕೇಶ**

# ಪರಿವಿಡಿ

**ಕೋಷ್ಟಕಗಳು**



**ಭೂಪಟ**

# ೧

# ಪ್ರವೇಶ

**ಕ**ರ್ನಾಟಕ, ಆಂಧ್ರ ಪ್ರದೇಶ, ಕೇರಳ, ತಮಿಳುನಾಡುಗಳಲ್ಲಿ ಕಂಡು ಬರುವ ಗೋಸಂಗಿ ಸಮುದಾಯವು ಅಲೆಮಾರಿ ಸಮುದಾಯಗಳಲ್ಲಿ ಒಂದಾಗಿದೆ.ಈ ಸಮುದಾಯದ ಕುರಿತು ಸರಿಯಾದ ಮಾಹಿತಿ ಇಲ್ಲದೆ ಅಧ್ಯಯನಕಾರರಲ್ಲಿ ಹೆಚ್ಚು ಗೊಂದಲಗಳು ಉಂಟಾಗಿವೆ. ಈ ಸಮುದಾಯದ ಕುರಿತು ಹಿಂದಿನ ಅಧ್ಯಯನಕಾರರು ಚಿಕ್ಕಪುಟ್ಟ ಮಾಹಿತಿ ನೀಡಿರುವರು. ಆದರೆ ಸಮಗ್ರ ಮಾಹಿತಿಯನ್ನು ನೀಡುವ ಕೃತಿಗಳು ಕನ್ನಡದಲ್ಲಿ ಬಂದಿಲ್ಲವೆಂದೇ ಹೇಳಬಹುದು. ಈ ಕೃತಿಯಲ್ಲಿ ಗೋಸಂಗಿಗಳ ಕುರಿತು ಸಮಗ್ರ ಮಾಹಿತಿ ನೀಡುವ ಪ್ರಯತ್ನ ಮಾಡಲಾಗಿದೆ ಈ ದೃಷ್ಟಿಯಿಂದ ಈ ಕೃತಿ ಮಹತ್ವದ್ದೆಂದು ಹೇಳಬಹುದು. ಈ ಕೆಳಗೆ ಗೋಸಂಗಿಗಳ ಕುರಿತು ಇದುವರೆಗೂ ನಡೆದ ಅಧ್ಯಯನಗಳ ಸಂಕ್ಷಿಪ್ತ ಮಾಹಿತಿಯನ್ನು ನೀಡಲಾಗಿದೆ.

**ಇದುವರೆಗೂ ನಡೆದ ಅಧ್ಯಯನಗಳು**

೧೯೦೧ರ ಮದ್ರಾಸ್ ಜನಗಣತಿ ವರದಿಯಲ್ಲಿ ಬಹುಶಃ ಗೋಸಂಗಿಗಳನ್ನೇ "ಕೋಸಂಗಿ" ಎಂದು ದಾಖಲಿಸಲಾಗಿದೆ, ೧೮೮೯ರ ವಿಶಾಖಪಟ್ಟಣ ಮ್ಯಾನುವೆಲ್‌ನಲ್ಲಿ ಗೋಸಂಗಿಗಳನ್ನು ಗೋಸಾಂಗಾಲು ಎಂದು ವಿವರಿಸಲ್ಪಟ್ಟಿದೆ.ಭಿಕ್ಷೆ ಬೇಡುತ್ತಿದ್ದ ಮಾದಿಗ ರೊಡನೆ ಇವರು ಸಂಪರ್ಕ ಹೊಂದಿದ್ದರು ಎಂಬುದಾಗಿ ತಿಳಿಸಲಾಗಿದೆ. ಹಾಗೆ ರಾಮ-ರಾವಣರ ಯುದ್ಧದಲ್ಲಿ ಸಹಾಯ ಮಾಡಿದ ಆದಿಜಾಂಬವನು ಇವರ ಆರಾಧ್ಯ ದೈವವಾಗಿರುವನು ಎನ್ನುವ ಉಲ್ಲೇಖಗಳು ಎಡ್ಗರ್ ಥರ್ಸ್ಟನ್‌ರವರ Castes and Tribes of Southern India ಕೃತಿಯಲ್ಲಿ ದೊರೆಯುತ್ತದೆ. ಹಾಗೆ ಇವರೇ ತಿಳಿಸುವಂತೆ ೧೯೮೧ ಜನಗಣತಿ ವರದಿ ಪ್ರಕಾರ ಆಂಧ್ರದ ಕರೀಂನಗರ, ನಿಜಾಮಬಾದ, ಮತ್ತು ವಾರಂಗಲ್ ಜಿಲ್ಲೆಗಳಲ್ಲಿ ಗೋಸಂಗಿಗಳು ೭೬೫೩ ರಷ್ಟು ಜನಸಂಖ್ಯೆ ದಾಖಲಾಗಿರುವುದನ್ನು ತಿಳಿಸಿದ್ದಾರೆ, ಗೋಸಂಗಿಗಳು ಬಿಕ್ಷೆ ಬೇಡುವುದು, ಸಣ್ಣಮುಟ್ಟ ವ್ಯಾಪಾರ ಮಾಡುವುದು, ಗಿಡಮೂಲಕೆಗಳಿಂದ ನಾಟಿವೈದ್ಯಗಾರಿಕೆ ಮಾಡುವರೆಂದು ತಿಳಿಸುತ್ತಾರೆ.

ಕೆ ಎಸ್ ಸಿಂಗ್‌ರವರ The Scheduled Castes ಎಂಬ ಗ್ರಂಥದ ೫೬೬

ರಿಂದ ೫೭೯ ಪುಟಗಳವರೆಗೆ ಗೋಸಂಗಿಗಳ ಕುರಿತು ಮಾಹಿತಿ ದೊರೆಯುತ್ತದೆ. ಆಂಧ್ರದಲ್ಲಿ ಗೋಸಂಗಿಗಳನ್ನು ಗೋಸಿಕ, ಗೋಸಿಕೊಳ್ಳು, ಗೋಸಾನ್‌ಗೊಳ್ಳು, ಗೊಸ್ಕ್ ಎಂಬ ಪದನಾಮಗಳಿಂದ ಕರೆಯುತ್ತಾರೆಂದು ತಿಳಿಸುತ್ತಾರೆ. ಹಾಗೆ ಗೋಸಂಗಿಗಳು ಗೋವುಗಳ ಲಾಲನೆ-ಪಾಲನೆ ಮಾಡುವವರಾಗಿದ್ದು ಅವುಗಳ ನೆರವಿನಿಂದ ತಮ್ಮ ವಸ್ತುಗಳನ್ನು ಒಂದು ಕಡೆಯಿಂದ ಬೇರೊಂದು ಕಡೆಗೆ ಸಾಗಿಸುವರು. ಇವರು ಗೋ ಮಾಂಸ ತಿನ್ನುವುದರೊಂದಿಗೆ ಗೋಮಾಂಸವನ್ನು ಮಾರಾಟ ಮಾಡಿ ಹಣ ಸಂಪಾದನೆ ಮಾಡುವುದರಿಂದ ಗೋಸಂಗಿಗಳು ಎನ್ನುವ ಹೆಸರು ಇವರಿಗೆ ಬಂದಿತು ಎಂದು ತಿಳಿಸುತ್ತಾರೆ. ಆದರೆ ಇಂದು ಕರ್ನಾಟಕದಲ್ಲಿ ವಾಸಿಸುವ ಗೋಸಂಗಿಗಳಲ್ಲಿ ಗೋಮಾಂಸ ಮಾರಾಟ ಮಾಡುವುದು ಹಾಗೂ ತಿನ್ನುವ ಪದ್ಧತಿ ಕಂಡುಬರುವುದಿಲ್ಲ.

ಎನ್‌ಸೈಕ್ಲೊಪಿಡಿಯಾ ಆಫ್ ಸೆಡ್ಯೂಲ್ಡ್ ಕಾಸ್ಟ್ ಇನ್ ಇಂಡಿಯಾ (ವ್ಯಾಲುಮ್೧) ಕೃತಿಯಲ್ಲಿ ನಂದೂರಾಮ್ ಅವರು ಕರ್ನಾಟಕ, ಆಂಧ್ರ, ಕೇರಳ, ತಮಿಳುನಾಡುಗಳಲ್ಲಿ ನೆಲೆಸಿರುವ ಗೋಸಂಗಿಗಳ ಸ್ಥಾನಮಾನ, ಅವರ ಮೂಲ, ಜನಸಂಖ್ಯೆ, ಬೆಡಗು, ವಿಧಿನಿಷೇಧಗಳು, ಶಿಕ್ಷಣ, ವೃತ್ತಿ ಮುಂತಾದವುಗಳ ಕುರಿತು ವಿವರಣೆ ದೊರೆಯುತ್ತದೆ.

ವಿ ಎಸ್ ಮಾರುತಿ ಅವರು ಕನ್ನಡ ವಿಶ್ವ ವಿದ್ಯಾಲಯಕ್ಕೆ ಸಲ್ಲಿಸಿದ "ಗೋಸಂಗಿ ಸಮುದಾಯ-ಒಂದು ಅಧ್ಯಯನ" ಎನ್ನುವ ಅಪ್ರಕಟಿತ ಪಿಎಚ್ ಡಿ ಮಹಾಪ್ರಬಂಧದಲ್ಲಿ ಗೋಸಂಗಿಗಳ ಮಾಹಿತಿಗಿಂತ ಹೆಚ್ಚಾಗಿ ಡುಂಗ್ರಿ ಗರಾಸಿಯ ಬುಡಕಟ್ಟಿನ ಮಾಹಿತಿ ದೊರೆಯುತ್ತದೆ, ಪ್ರಾಯಶಃ ಡುಂಗ್ರಿ ಗರಾಸಿಯ ಬುಡಕಟ್ಟನ್ನು ಗೋಸಂಗಿ ಸಮುದಾಯ ವೆಂದು ತಪ್ಪಾಗಿ ಭಾವಿಸಿರುವುದೇ ಇದಕ್ಕೆ ಕಾರಣವಿರಬಹುದು.

ಡಾ ಎಲ್ಲಪ್ಪ ಕೆ ಕೆ ಪುರರ "ದೊಕ್ಕಲು ಮಕ್ಕಳು" ಕೃತಿಯಲ್ಲಿ ಕಂಚಿ ಶಾಸನವನ್ನು ಉಲ್ಲೇಖಿಸುತ್ತ ಛಲವಾದಿ ಮತ್ತು ಗೋಸಂಗಿಗಳಿಗೆ ಬಿರುದು ಬಾವಲಿಗಳ ಕುರಿತು ನಡೆಯುವ ವಾಗ್ವಾದಗಳ ಪ್ರಸಂಗವನ್ನು ಸಾಂದರ್ಭಿಕವಾಗಿ ವಿವರಿಸಲಾಗಿದೆ.

ಬಸವರಾಜ ನೆಲ್ಲಿಸರರು ಗೋಸಂಗಿಗಳ ಬಗ್ಗೆ ವಿವರಗಳನ್ನು ನೀಡುವ ಲೇಖನ ವೊಂದು ಬರೆದಿರುವರು. ಆ ಲೇಖನವು ಜಾನಪದ ಸಾಹಿತ್ಯ ದರ್ಶನ(೧೯೯೩) ಕೃತಿಯಲ್ಲಿ ಪ್ರಕಟಗೊಂಡಿದೆ.

ಕನ್ನಡ ವಿಶ್ವವಿದ್ಯಾಲಯದ ಹಂಪಿ, ಪ್ರಸಾರಾಂಗ ಪ್ರಕಟಿಸಿದ ಹೆಚ್ ಡಿ ಪ್ರಶಾಂತರವರ ಕರ್ನಾಟಕ ರಾಜ್ಯಕೋಶ-೪ "ಜನ ಸಮುದಾಯ ಸಂಪುಟ"ಕೃತಿಯಲ್ಲಿ ಗೋಸಂಗಿ ಸಮುದಾಯದ ಪರಿಚಯಾತ್ಮಕ ಲೇಖನವಿದೆ. ಗೋಸಂಗಿಗಳನ್ನು ಅತಿತ, ಗೋಸಾವಿ ಗಳೆಂದೂ ಕರೆಯುವುದಾಗಿಯೂ ಗೋಸಂಗಿಗಳಿಗೂ ಆ ಸಮುದಾಯಗಳಿಗೂ ಯಾವುದೇ ಭಿನ್ನತೆ ಇಲ್ಲವೆಂದು ತಿಳಿಸುತ್ತಾರೆ. ಆದರೆ, ಗೋಸಂಗಿಗಳಿಗೂ ಆ ಎರಡು ಸಮುದಾಯಗಳಿಗೂ ಯಾವುದೇ ಸಂಬಂಧವಿರುವುದಿಲ್ಲ.

**ಹೆಸರು ಔಚಿತ್ಯ, ಜನಸಂಖ್ಯೆ**

ಗೋಸಂಗಿ ಅಂದರೆ ಗೋ+ಸಂಗಿ=ಗೋಸಂಗಿ ಗೋ ಎಂದರೆ ಹಸು ಸಂಗಿ ಎಂದರೆ ಗೋವುಗಳ ಸಂಗದಲ್ಲಿರುವ ಪಾಲಕ ಎಂದು ಮುಂತಾಗಿ ಅರ್ಥೈಸಿ

ಕೊಳ್ಳಬಹುದು, ದಾಸನೂರು ಕೂಸಣ್ಣನವರು ಶೋಷಿತ ಜಂಗಮರ ಮೀಸಲಾತಿ ಕೃತಿಯಲ್ಲಿ ಗೋಸಂಗಿಗಳ ಕುರಿತು ತಿಳಿಸುತ್ತ ಅವರು ಗೋವುಗಳನ್ನು ಕೊಲ್ಲುವವರಾದುದರಿಂದ ಗೋಸಂಗಿ ಎನ್ನುವ ಹೆಸರು ಬಂದಿರುವುದಾಗಿ ತಿಳಿಸುತ್ತಾರೆ (ದಾಸನೂರು, ಕೂಸಣ್ಣ: ೧೯೯೮: ೧೩೨). ನಂದು ರಾಮರವರು ಎನ್‌ಸೈಕ್ಲೋಪಿಡಿಯಾ ಆಫ್ ಸೆಡ್ಯೂಲ್ಡ್ ಕಾಸ್ಟ್ ಇನ್ ಇಂಡಿಯಾ ಎನ್ನುವ ಕೃತಿಯಲ್ಲಿ ಗೋಸಂಗಿ ಪದದ ಹುಟ್ಟಿನ ಕುರಿತು ತಿಳಿಸುತ್ತಾರೆ. ಗೋಸಂಗಿ ಎನ್ನುವುದು ಗೋ ಹಾಗು ಹಂಸಕ ಎನ್ನುವ ಎರಡು ಪದಗಳ ಗುಂಪು, ಗೋಸಂಗಿಗಳನ್ನು ಗೋಹಂಸಕ ಎಂದೂ ಕರೆಯುತ್ತಾರೆ, ಗೋ ಎಂದರೆ ಹಸು ಎಂದರ್ಥ, ಹಂಸಕ ಎಂದರೆ ಕೊಲ್ಲುವವನು ಎನ್ನುವ ಅರ್ಥವಿದೆ, ತಲೆಯ ಮೇಲೆ ಗೋಮಾಂಸವನ್ನು ಹೊತ್ತುಕೊಂಡು ಮಾರಾಟ ಮಾಡುವ ಕಾಯಕದಲ್ಲಿ ನಿರತರಾದುದರಿಂದ ಇವರಿಗೆ ಗೋಸಂಗಿ ಎಂಬ ಹೆಸರು ಬಂದುದಾಗಿ ನಂದೂರಾಮ್ ರವರು ತಿಳಿಸುತ್ತಾರೆ(ನಂದೂರಾಮ್:೨೦೦೭:೨೮೧). ಮಾದಿಗ ಸಮುದಾಯಕ್ಕೆ ತೀರಾ ಹತ್ತಿರದಲ್ಲಿರುವ ಗೋಸಂಗಿಗಳಿಗೆ ಗೋವುಗಳ ಸಂಗದಲ್ಲಿರುವುದರಿಂದಲೇ ಗೋಸಂಗಿ ಎನ್ನುವ ಹೆಸರು ಬಂದಿರುವ ಸಾಧ್ಯತೆಗಳಿವೆ.

**ಪೌರಾಣಿಕ, ಐತಿಹಾಸಿಕ ಮತ್ತು ಸಾಮಾಜಿಕ ಹಿನ್ನೆಲೆ**

ಮೂಲತಃ ಆದಿಜಾಂಬವನ ವಂಶಸ್ಥರು ತಾವು ಎಂದು ಗೋಸಂಗಿಗಳು ತಿಳಿಸುತ್ತಾರೆ. ಶಿವನು ನೀರೇ ನಿರಂಕಾರವಾದ ಈ ಜಗತ್ತಿನಲ್ಲಿ ಮೊದಲಿಗೆ ಜಾಂಬವಂತನನ್ನು ಸೃಷ್ಟಿಸಿದನೆಂದೂ ಆ ಜಾಂಬವಂತನ ಮಕ್ಕಳಲ್ಲಿ ಮೊದಲನೆಯವನೇ ಗೋಸಂಗಿ ಎಂದು ತಿಳಿಸುತ್ತಾರೆ,

ಮೂಲತಃ ತಾವು ರಾಜಸ್ಥಾನದವರೆಂದೂ, ರಾಜಾ ರಾಣಪ್ರತಾಪನ ಆಸ್ಥಾನದಲ್ಲಿ ಕೆಲಸಗಾರರಾಗಿ ಇದ್ದವರೆಂದೂ, ಮುಸಲಮಾನರ ದಬ್ಬಾಳಿಕೆಯಿಂದಾಗಿ ತಾವು ರಾಜಸ್ಥಾನವನ್ನು ಬಿಟ್ಟು ಗುಜರಾತ್ ಮೂಲಕ ಮಹಾರಾಷ್ಟ್ರಕ್ಕೆ ವಲಸೆ ಬಂದು ತರುವಾಯ ಕೇರಳ, ಕರ್ನಾಟಕ, ತಮಿಳುನಾಡು, ಒರಿಸ್ಸ ಮುಂತಾದ ಕಡೆ ವಲಸೆ ಹೋಗಿ ನೆಲೆಸಿದೆವೆಂದು ತಿಳಿಸುತ್ತಾರೆ.

ಸಾಮಾಜಿಕವಾಗಿ ತುಂಬಾ ಕೆಳಸ್ಥರದಲ್ಲಿರುವ ಗೋಸಂಗಿಗಳು ಮೂಲತಃ ಅಲೆಮಾರಿಗಳು, ಊರ ಹೊರಭಾಗಗಳಲ್ಲಿ ಗುಡಾರಗಳನ್ನು ರಚಿಸಿಕೊಂಡಿರುತ್ತಿದ್ದ ಇವರು ಬಿಕ್ಷಾಟನೆ, ನಾಟಿ ವೈದ್ಯ ಮುಂತಾದವುಗಳನ್ನು ಮಾಡಿ ಜೀವನ ನಿರ್ವಹಣೆ ಮಾಡುತ್ತಿದ್ದರು, ಇತ್ತೀಚೆಗೆ ಒಂದೇ ಕಡೆ ನೆಲೆಸತೊಡಗಿರುವ ಇವರಲ್ಲಿ ಸಾಮಾಜಿಕವಾಗಿ ಅಂತಹ ಬದಲಾವಣೆಗಳೇನೂ ಕಂಡುಬರುವುದಿಲ್ಲ.

# ೨

# ಮೂಲ ಮತ್ತು ಪ್ರಸಾರ

## ಮೂಲಸ್ಥಾನ, ವಲಸೆಯ ಮಾರ್ಗ

ಗೋಸಂಗಿ ಸಮುದಾಯದ ಮೂಲವು ಉತ್ತರ ಭಾರತದ ರಾಜಸ್ಥಾನವಿರಬೇಕು. ಮೊಗಲ ಅರಸರ ದಬ್ಬಾಳಿಕೆಯ ಹಿನ್ನೆಲೆಯಲ್ಲಿ ಇವರು ತಮ್ಮ ಮೂಲಸ್ಥಾನವಾದ ರಾಜಸ್ಥಾನವನ್ನು ತ್ಯಜಿಸಿ ಗುಜರಾತ್ ಮೂಲಕ ಬೇರೆ ಬೇರೆ ಕಡೆ ವಲಸೆ ಹೋಗಿರಬೇಕು. ಈ ರೀತಿ ವಲಸೆ ಹೋಗುವಾಗ ಈ ಸಮುದಾಯದ ಕೆಲವು ಗುಂಪುಗಳು ದಕ್ಷಿಣ ಭಾರತದತ್ತ ವಲಸೆ ಬಂದವು. ದಕ್ಷಿಣ ಭಾರತದ ಕರ್ನಾಟಕ, ಆಂಧ್ರ, ತಮಿಳುನಾಡುಗಳ ಕಾಡುಗಳಲ್ಲಿ ಮೊದಲಿಗೆ ನೆಲೆಸಿರಬೇಕು, ಅರಣ್ಯ ನೀತಿಯಿಂದಾಗಿ ಕಾಡು ಇವರಿಂದ ದೂರವಾಯಿತು, ಹೀಗಾಗಿ ಇವರು ಅಲೆಮಾರಿಗಳಾಗಿ ತಿರುಗುವಂತಾಯಿತು,

ಭೂಮಂಡಲ ಹುಟ್ಟಿದ ತರುವಾಯ ಮೊಟ್ಟ ಮೊದಲಿಗೆ ಗೋಸಂಗಿಗಳೇ ಜನ್ಮ ತಾಳಿದರು. ನಂತರ ಕುಲ ಹದಿನೆಂಟು ಜಾತಿಗಳು ಸೃಷ್ಟಿಗೊಂಡವು ಎಂದು ಇವರಲ್ಲಿರುವ ಜನಪದ ಕತೆಗಳು ಹೇಳುತ್ತವೆ. ಗೋಸಂಗಿಯೇ ಭೂಮಂಡಲದ ಸೃಷ್ಟಿಕರ್ತನೆಂದು ಬ್ರಹ್ಮಾಂಡ ಪುರಾಣ, ಶಿವಪುರಾಣ, ವಿಷ್ಣುಪುರಾಣಗಳಲ್ಲಿ ಉಲ್ಲೇಖಗಳಿವೆ ಎಂದು ದಕ್ಕಲಿಗರ ಕಂಚಿಶಾಸನದಲ್ಲಿ ವಿವರಿಸಲಾಗಿದೆ(ಎಲ್ಲಪ್ಪ, ಕೆ ಕೆ ಪುರ: ೧೯೯೭: ೨೯೦-೨೯೭).

ಭಾರತದ ಬೇರೆ ಬೇರೆ ಪ್ರದೇಶಗಳಲ್ಲಿ ಭಿನ್ನ ಭಿನ್ನ ಹೆಸರುಗಳಿಂದ ಇವರನ್ನು ಗುರುತಿಸಲಾಗುತ್ತದೆ. ಗೋಸಂಗಿ, ಗೋಸಂಗಲು, ಗೋಸರ, ಗೋಸಿಕಾಳ್ಳು, ಗೋಷ್ಟಿಕ, ಎಂದು ಆಂಧ್ರ ಪ್ರದೇಶದಲ್ಲಿ ಕರೆಯುತ್ತಾರೆ.

## ಭೌಗೋಳಿಕತೆ

ಅಲೆಮಾರಿಗಳಾದ ಗೋಸಂಗಿಯವರು ಉತ್ತರ ಭಾರತವನ್ನು ಬಿಟ್ಟು ದಕ್ಷಿಣ ಭಾರತದ ಕಡೆ ವಲಸೆ ಬಂದಿರುತ್ತಾರೆ, ದಕ್ಷಿಣ ಭಾರತದ ಆಂಧ್ರಪ್ರದೇಶ, ಕೇರಳ, ತಮಿಳನಾಡು, ಒರಿಸ್ಸ ರಾಜ್ಯಗಳಲ್ಲಿ ಇವರನ್ನು ಕಾಣಬಹುದು.

ಕರ್ನಾಟಕದ ಬೆಂಗಳೂರು, ಬಳ್ಳಾರಿ, ಚಿಕ್ಕ ಮಗಳೂರು, ದಾವಣಗೆರೆ, ಧಾರವಾಡ, ಗದಗ, ಗಲಬರ್ಗಾ, ಹಾಸನ, ಹಾವೇರಿ, ಕಾರವಾರ, ಕೊಪ್ಪಳ, ರಾಯಚೂರು, ಶಿವಮೊಗ್ಗ, ತುಮಕೂರು, ಉಡುಪಿ, ಹೀಗೆ ಹದಿನೈದು ಜಿಲ್ಲೆಗಳಲ್ಲಿ ಗೋಸಂಗಿಗಳ

ನೆಲೆ ಕಂಡುಬರುವುದು, ಇಂದು ಇವರ ಅಲೆದಾಟವೇನಿದ್ದರೂ ಕೇವಲ ವ್ಯಾಪಾರಕ್ಕಾಗಿ ಮಾತ್ರ ವಲಸೆ ಹೋಗಿ ಮರಳಿ ತಮ್ಮ ನೆಲೆಗಳಿಗೆ ವಾಪಾಸಾಗುವರು, ಹಿಂದೆ ಹೊಟ್ಟೆಪಾಡಿಗಾಗಿ ಒಂದು ಕಡೆ ನೆಲೆನಿಲ್ಲದೆ ಊರಿಂದೂರಿಗೆ ವಲಸೆ ಹೋಗುತ್ತಿದ್ದ ಇವರು ಹೆಚ್ಚಾಗಿ ಸಂತೆ ಮೈದಾನ, ಶಾಲಾಕಟ್ಟೆ, ಬಸ್ ನಿಲ್ದಾಣ, ಗುಡಿ ಗುಂಡಾರ ಮುಂತಾದ ಕಡೆ ಇವರು ವಾಸ ಮಾಡುತ್ತಿದ್ದರು.

## ಪ್ರಸಾರ ನೆಲೆಗಳು

ಭಾರತದ ದಕ್ಷಿಣ ಭಾಗದ ಆಂಧ್ರ ಪ್ರದೇಶ, ತಮಿಳನಾಡು, ಕೇರಳ ರಾಜ್ಯಗಳಲ್ಲಿ ಗೋಸಂಗಿ ಸಮುದಾಯ ವಾಸವಾಗಿರುವುದು.

**ಕೋಷ್ಟಕ: ೨.೧. ಭಾರತದ ಗೋಸಂಗಿ ಸಮುದಾಯದ ಜನಸಂಖ್ಯೆ (೨೦೦೧)**

| ರಾಜ್ಯಗಳು | ಒಟ್ಟು/ ಗ್ರಾಮೀಣ/ ನಗರ | ಜನಸಂಖ್ಯೆ | | |
|---|---|---|---|---|
| | | ಗಂಡು | ಹೆಣ್ಣು | ಒಟ್ಟು |
| ಆಂಧ್ರ ಪ್ರದೇಶ | ಒಟ್ಟು | ೧೯೮೫೯ | ೯೮೩೨ | ೧೦೦೨೭ |
| | ಗ್ರಾಮೀಣ | ೧೭೩೧೭ | ೮೫೬೧ | ೮೭೫೬ |
| | ನಗರ | ೨೫೪೨ | ೧೨೭೧ | ೧೨೭೧ |
| ಕೇರಳ | ಒಟ್ಟು | ೬೦ | ೩೬ | ೨೪ |
| | ಗ್ರಾಮೀಣ | ೪೯ | ೨೮ | ೨೧ |
| | ನಗರ | ೧೧ | ೦೮ | ೦೩ |
| ತಮಿಳನಾಡು | ಒಟ್ಟು | ೧೫೨೨ | ೭೭೦ | ೭೫೨ |
| | ಗ್ರಾಮೀಣ | ೫೧೫ | ೨೬೨ | ೨೫೩ |
| | ನಗರ | ೧೦೦೭ | ೫೦೮ | ೪೯೯ |

ಆಧಾರ : ನಂದುರಾಮ, ಎನ್‌ಸೈಕ್ಲೋಪಿಡಿಯಾ ಆಫ್‌ಸೆಡ್ಯೂಲ್ಡ್ ಕ್ಯಾಸ್ಟ್, ೨೦೦೭

ಕರ್ನಾಟಕ ರಾಜ್ಯದ ೧೫ ಜಿಲ್ಲೆಗಳಲ್ಲಿ ಈ ಸಮುದಾಯದವರು ನೆಲೆಸಿರುವರು. ಗೋಸಂಗಿಗಳು ವಾಸಮಾಡುತ್ತಿರುವ ಜಿಲ್ಲೆಗಳು ಮತ್ತು ಜನಸಂಖ್ಯೆ ವಿವರ ಹೀಗಿದೆ.

## ಜನಸಂಖ್ಯೆ

ನಂದೂರಾಮ್ ಅವರು ಎನ್‌ಸೈಕ್ಲೋಪಿಡಿಯಾ ಆಫ್‌ಸೆಡ್ಯೂಲ್ಡ್ ಕ್ಯಾಸ್ಟ್ ಆಂಧ್ರ ಕರ್ನಾಟಕ, ಕೇರಳ ಇನ್ ಇಂಡಿಯಾ ಕೃತಿಯಲ್ಲಿ ತಮಿಳುನಾಡು ರಾಜ್ಯಗಳ ಕುರಿತು ವಿವರಿಸುತ್ತಾ ೧೯೦೧ ರಿಂದ ೨೦೦೧ರ ವರೆಗೆ ಅಂದರೆ ಒಂದು ನೂರು ವರ್ಷಗಳಲ್ಲಿ ಈ ನಾಲ್ಕು ಜಿಲ್ಲೆಗಳಲ್ಲಿ ಗೋಸಂಗಿಗಳ ಜನಸಂಖ್ಯೆ ಎಷ್ಟಿತ್ತು ಈ ಸಮುದಾಯಕ್ಕೆ ಸಂಬಂಧಿಸಿದಂತೆ ಒಂದು ನೂರು ವರ್ಷಗಳಲ್ಲಿ ಯಾವ ರೀತಿಯ ಏರುಪೇರಾಗಿದೆ ಎಂಬುದನ್ನು ಅಂಕಿ ಅಂಶಗಳ ಮೂಲಕ ವಿವರಿಸಿದ್ದಾರೆ. ಅನುಬಂಧದಲ್ಲಿ ನೋಡಿ.

ಆಂಧ್ರದಲ್ಲಿ ೧೯೦೧ ರಲ್ಲಿ ೧೬೧ ರಷ್ಟು ಜನಸಂಖ್ಯೆ ಕಂಡು ಬಂದರೂ ಅದು ೧೯೨೧ಕ್ಕೆ ಬರುವಷ್ಟೊತ್ತಿಗೆ ಕೇವಲ ೨೮ ಮಾತ್ರವಾಗಿದೆ. ತರುವಾಯ ೧೯೬೧ರ ನಂತರ ಈ ಸಮುದಾಯ ಜನಸಂಖ್ಯಾ ಗಣತಿಗೆ ೬೫ ಜನ ಮಾತ್ರ ಕಂಡುಬಂದಿದ್ದಾರೆ. ೨೦೦೧ರಲ್ಲಿ ೧೯೮೫೯ ರಷ್ಟು ಜನಸಂಖ್ಯೆ ಕಂಡುಬಂದಿದೆ. ಅದೇ ರೀತಿಯಾಗಿ ಕೇರಳದಲ್ಲಿ ೧೯೬೧ರ ಜನಗಣತಿಯಲ್ಲಿ ಕೇವಲ ೧ ವ್ಯಕ್ತಿ ಮಾತ್ರ ಗಣತಿಗೆ ದೊರೆತಿದ್ದಾರೆ. ೧೯೮೧ರಲ್ಲಿ ೭೫೯ ಇದ್ದದ್ದು ೧೯೯೧ಕ್ಕೆ ೩೪೪ಕ್ಕೆ ಜನಸಂಖ್ಯೆ ಇಳಿದಿದೆ. ೨೦೦೧ ಕ್ಕೆ ಅದು ಕೇವಲ ೬೦ಕ್ಕೆ ಸೀಮಿತಗೊಂಡಿದೆ.

ತಮಿಳುನಾಡಿನಲ್ಲಿಯೂ ಗೋಸಂಗಿಗಳು ೧೯೬೧ ಜನಗಣತಿಗೆ ದೊರೆತಿದ್ದಾರೆ. ಅದಕ್ಕಾಗಿ ಮೊದಲು ಇವರನ್ನು ಗುರುತಿಸಲು ಸಾಧ್ಯವಾಗಿಲ್ಲ. ೧೯೬೧ರಲ್ಲಿ ೮೫ ಜನ ಗಣತಿಗೆ ದೊರೆತರೆ ೧೯೭೧ಕ್ಕೆ ಅದು ಕೇವಲ ೭ ಕ್ಕೆ ಇಳಿದಿದೆ. ೧೯೮೧ ರಲ್ಲಿ ೧೫೭, ೧೯೯೧ಕ್ಕೆ ೧೩೪೧, ೨೦೦೧ ಕ್ಕೆ ೧೫೨೨ ಜನ ಗಣತಿಗೆ ದೊರೆತಿದ್ದಾರೆ.

ಅದೇ ರೀತಿಯಾಗಿ ಕರ್ನಾಟಕದಲ್ಲಿ ೧೯೦೧ ರಿಂದ ೧೯೬೧ರ ವರೆಗೆ ಈ ಸಮುದಾಯ ಜನಗಣತಿಗೆ ದೊರೆಯದೆ ಹೋಗಿದೆ. ೧೯೭೧ರಲ್ಲಿ ಕೇವಲ ೧೨ ಜನ ಗಣತಿದಾರರಿಗೆ ದೊರೆತರೆ ೧೯೮೧ಕ್ಕೆ ೭೪೭ ಜನ ಕಂಡು ಬಂದಿದ್ದಾರೆ. ೧೯೯೧ ಕ್ಕೆ ೧೯೧೧ ಜನರು ೨೦೦೧ಕ್ಕೆ ೧೬೩೪ ಜನ ಗಣತಿಗೆ ದೊರೆತಿದ್ದಾರೆ. ೨೦೦೭ಕ್ಕೆ ಕರ್ನಾಟಕದಲ್ಲಿ ನೆಲೆನಿಂತ ಗೋಸಂಗಿಗಳು ಜನಸಂಖ್ಯೆ ಗುರುತಿಸಲು ಕ್ಷೇತ್ರಕಾರ್ಯ ನಡೆಸಿದಾಗ ನಮಗೆ ದೊರೆತ ಮಾಹಿತಿಗಳು ಈ ಕೆಳಗಿನಂತಿದೆ.

ಕರ್ನಾಟಕದ ಒಟ್ಟು ೧೫ ಜಿಲ್ಲೆಗಳಲ್ಲಿ ಗೋಸಂಗಿಗಳು ಕಂಡುಬರುತ್ತಾರೆ. ಶಿವಮೊಗ್ಗದಲ್ಲಿ ಅತೀ ಹೆಚ್ಚು ಕುಟುಂಬಗಳು ೧೨೦ ನೆಲೆ ನಿಂತಿದ್ದು ಅಲ್ಲಿ ಒಟ್ಟು ೪೦೦ ಜನಸಂಖ್ಯೆ ಕಂಡುಬರುತ್ತದೆ.

ಉಡುಪಿ ಜಿಲ್ಲೆಯಲ್ಲಿ ಕೇವಲ ಒಂದೇ ಕುಟುಂಬ ಕಂಡುಬಂದಿದ್ದು ಉಡುಪಿಯ ಜನಸ್ಯೆ ಕೇವಲ ೫ ಮಾತ್ರ ಇರುವುದು ಕಂಡುಬಂದಿದೆ.

ಚಿಕ್ಕಮಗಳೂರಿನ ೬೬ ಕುಟುಂಬಗಳು ೨೨೩ ಜನಸಂಖ್ಯೆ ದಾವಣಗೆರೆ ೫೭ ಕುಟುಂಬಗಳು ಜನಸಂಖ್ಯೆ ೨೦೨ ಹಾವೇರಿಯಲ್ಲಿ ೫೫ ಕುಟುಂಬಗಳು ೧೬೮ ಗುಲಬರ್ಗಾದಲ್ಲಿ ೩೧ ಕುಟುಂಬಗಳು ೧೩೧, ಬಳ್ಳಾರಿ ೩೨ ಕುಟುಂಬಗಳ ೧೦೯ ಕಂಡು ಬರುತ್ತದೆ. ಇವುಗಳ ಹೊರತಾಗಿ ಬೆಂಗಳೂರು, ಗದಗ, ಹಾಸನ, ಕಾರವಾರ, ಕೊಪ್ಪಳ, ರಾಯಚೂರು, ತುಮಕೂರು, ಉಡುಪಿ ಜಿಲ್ಲೆಗಳಲ್ಲಿ ೨೫ರೊಳಗೆ ಕುಟುಂಬಗಳು ನೆಲೆಸಿರುವುದು ಕಂಡುಬರುತ್ತದೆ.

ಈ ಹದಿನೈದು ಜಿಲ್ಲೆಗಳ ಹೊರತಾಗಿರುವ ಜಿಲ್ಲೆಗಳಲ್ಲಿ ಗೋಸಂಗಿಗಳು ನೆಲೆಸದೇ ಇರುವುದು ಕಂಡುಬಂದರೂ ಔಷಧ ವ್ಯಾಪಾರ, ಭಿಕ್ಷಾಟನೆ ಇತ್ಯಾದಿಗಳಿಗಾಗಿ ಬೇರೆ ಜಿಲ್ಲೆಗಳಿಗೂ ಈ ಸಮುದಾಯದವರು ಸಂಚರಿಸುವುದುಂಟು.

ಕ್ಷೇತ್ರಕಾರ್ಯ ಅಧ್ಯಯನ ಕೈಗೊಂಡಾಗ ದಾವಣಗೆರೆ ೧೫ ಕುಟುಂಬಗಳು,

ಬಳ್ಳಾರಿ ೧೪ ಕುಟುಂಬಗಳು, ಶಿವಮೊಗ್ಗ ೫ ಕುಟುಂಬಗಳು ಅಲೆಮಾರಿಗಳಾಗಿ ಬೇರೆ ಕಡೆ ವಲಸೆ ಹೋಗಿದ್ದರಿಂದಅವರ ಮಾಹಿತಿ ಸರಿಯಾದ ರೀತಿಯಲ್ಲಿ ದೊರೆಯ ಲಿಲ್ಲ. ಆ ಕಾರಣಕ್ಕಾಗಿ ಆ ಕುಟುಂಬಗಳನ್ನು ಕ್ಷೇತ್ರಕಾರ್ಯ ಅಧ್ಯಯನ ವ್ಯಾಪ್ತಿಗೆ ತೆಗೆದು ಕೊಳ್ಳಲು ಸಾಧ್ಯವಾಗಿರುವುದಿಲ್ಲ.

ಕ್ಷೇತ್ರಧ್ಯಯನದಲ್ಲಿ ಒಟ್ಟು ೪೯೧ ಕುಟುಂಬಗಳು ಕಂಡುಬಂದಿವೆ. ಇದರಲ್ಲಿ ಪುರುಷರು ೯೯೧ ಹಾಗೂ ಮಹಿಳೆಯರು ೮೭೯ ಒಟ್ಟು ೧೭೭೦ ಗೋಸಂಗಿ ಜನಸಂಖ್ಯೆ ಇರುವುದು ಕಂಡುಬಂದಿದೆ.

**ಗ್ರಾಮೀಣ ಜನಸಂಖ್ಯೆ**

ಗೋಸಂಗಿಗಳು ಇಂದು ಗಂಧದೆಣ್ಣೆ, ಮೋಡಕ ವ್ಯಾಪಾರ, ಪ್ಲಾಸ್ಟಿಕ್ ವಸ್ತುಗಳ ರಿಪೇರಿ ಇತ್ಯಾದಿಗಳಲ್ಲಿ ತೊಡಗಿಸಿಕೊಂಡಿರುವುದರಿಂದ ಈ ಸಮುದಾಯದವರು ಗ್ರಾಮೀಣ ಪ್ರದೇಶಕ್ಕಿಂತ ಹೆಚ್ಚಾಗಿ ಪಟ್ಟಣ ಪ್ರದೇಶಗಳಲ್ಲಿ ಹೆಚ್ಚು ನೆಲೆ ನಿಂತಿರುವುದನ್ನು ಕಾಣಬಹುದಾಗಿದೆ.

ಬಳ್ಳಾರಿ, ಚಿಕ್ಕಮಗಳೂರು, ದಾವಣಗೆರೆ, ಧಾರವಾಡ, ಗದಗ, ಗುಲ್ಬರ್ಗಾ, ಹಾಸನ, ಹಾವೇರಿ, ಕೊಪ್ಪಳ ಹೀಗೆ ಒಟ್ಟು ೯ ಜಿಲ್ಲೆಗಳ ಗ್ರಾಮೀಣ ಪ್ರದೇಶಗಳಲ್ಲಿ ಗೋಸಂಗಿಗಳು ನೆಲೆ ನಿಂತಿದ್ದಾರೆ. ಚಿಕ್ಕಮಗಳೂರು ಹೊರತಾಗಿ ಇತರ ಜಿಲ್ಲೆಗಳ ಗ್ರಾಮೀಣ ಪ್ರದೇಶದಲ್ಲಿ ೧೭ ಕುಟುಂಬಗಳಿಗಿಂತ ಕಡಿಮೆ ಕುಟುಂಬಗಳು ನೆಲೆಸಿದೆ. ಹಾವೇರಿ ಜಿಲ್ಲೆ ರಾಣಿ ಬೆನ್ನೂರು ಗುಲಬರ್ಗಾ ಜಿಲ್ಲೆಯ ಜೇವರ್ಗಿ ತಾಲೂಕಿನ ಕುಮ್ಮಾನ ಸಿರಸಿಗಿಯಲ್ಲಿ ೧೨ ಕುಟುಂಬಗಳು ಹಾಗೂ ಬಳ್ಳಾರಿ ಹೂವಿನ ಹಡಗಲಿ ತಾಲೂಕಿನ ಬಿಜಾಪುರದಲ್ಲಿ ೧೩ ಕುಟುಂಬಗಳ ಕಂಡುಬರುತ್ತವೆ. ಅತ್ಯಲ್ಪ ಕುಟುಂಬಗಳು ನೆಲೆನಿಂತಿವೆ.

ಅತೀ ಹೆಚ್ಚು ಕುಟುಂಬಗಳು ನೆಲೆನಿಂತಿರುವ ಪ್ರದೇಶವೆಂದರೆ ಚಿಕ್ಕಮಗಳೂರಿನ ತರೀಕೆರೆ ತಾಲೂಕಿನ ತ್ಯಾಗದಕಟ್ಟೆಯಲ್ಲಿ ೪೯ ಗೋಸಂಗಿ ಕುಟುಂಬಗಳು ಮೇಲೆ ತಿಳಿಸಿದ ೯ ಜಿಲ್ಲೆಗಳಲ್ಲಿ ನೆಲೆನಿಂತ ಒಟ್ಟು ಕುಟುಂಬಗಳು ೧೪೫ ಆಗಿದ್ದು ಒಟ್ಟು ೫೧೬ ಇದೆ. ಇದರಲ್ಲಿ ಪುರುಷರು ೨೫೪ ಹಾಗೂ ಮಹಿಳೆಯರು ೨೫೭ ಜನ ಇದ್ದಾರೆ.

**ನಗರ ಪ್ರದೇಶದ ಜನಸಂಖ್ಯೆ**

ಒಟ್ಟು ೧೫ ಜಿಲ್ಲೆಗಳ ನಗರ ಪ್ರದೇಶಗಳಲ್ಲಿಯೂ ಗೋಸಂಗಿ ಸಮುದಾಯ ನೆಲೆಸಿರುವುದು ಕಂಡುಬರುತ್ತದೆ. ಜಿಲ್ಲಾ ಕೇಂದ್ರಗಳಲ್ಲಿದೆ. ತಾಲೂಕು ಕೇಂದ್ರಗಳಲ್ಲಿ ಮತ್ತು ಮುಖ್ಯ ಪಟ್ಟಣಗಳಲ್ಲಿ ಈ ಸಮುದಾಯ ನೆಲೆನಿಂತಿದೆ. ಸಣ್ಣಪುಟ್ಟ ವ್ಯಾಪಾರಗಳನ್ನೇ ಅವಲಂಬಿಸಿರುವ ಈ ಸಮುದಾಯದ ಜನ ನಗರ ಪ್ರದೇಶದ ಬಯಲು ಜಾಗಗಳಲ್ಲಿ ಡೇರೆಗಳನ್ನು ರಚಿಸಿಕೊಂಡು ಜೀವಿಸುತ್ತಿದ್ದರು. ಇತ್ತೀಚೆಗೆ ವಾಸದ ಡೇರೆಗಳು ತಕ್ಕಮಟ್ಟಿಗೆ ಮಾಯವಾಗಿ ಅವು ಚಿಕ್ಕ ಮನೆಗಳ ಸ್ವರೂಪ ಪಡೆಯತೊಡಗಿವೆ.

ದಾವಣಗೆರೆ, ಧಾರವಾಡ, ಹಾವೇರಿಗಳಲ್ಲಿ ೧೦೦ರ ಮೇಲ್ಪಟ್ಟ ಜನಸಂಖ್ಯೆ

ಕಂಡುಬರುತ್ತದೆ. ಅದರಲ್ಲೂ ಶಿವಮಮೊಗ್ಗ ಒಂದರಲ್ಲಿಯೇ ೪೦೦ ಜನಸಂಖ್ಯೆ ನೆಲೆಸಿದೆ. ಇನ್ನುಳಿದ ಜಿಲ್ಲೆಗಳಲ್ಲಿ ೧೦೦ರೊಳಗೆ ಜನಸಂಖ್ಯೆ ಇರುವುದು ಕಂಡುಬರುತ್ತದೆ.

**ಕೋಷ್ಟಕ: ೨.೨.**

**ಕರ್ನಾಟಕ ಗೋಸಂಗಿ ಸಮುದಾಯದ ಜನಸಂಖ್ಯೆ (೨೦೦೭)**

| ಸಂ | ಜಿಲ್ಲೆ | ಕುಟುಂಬ | ಗಂಡು | ಹೆಣ್ಣು | ಒಟ್ಟು |
|---|---|---|---|---|---|
| ೧ | ಬೆಂಗಳೂರು | ೯ | ೧೭ | ೧೫ | ೩೨ |
| ೨ | ಬಳ್ಳಾರಿ | ೩೨ | ೫೫ | ೫೪ | ೧೦೯ |
| ೩ | ಚಿಕ್ಕಮಂಗಳೂರು | ೬೬ | ೧೦೩ | ೧೨೦ | ೨೨೩ |
| ೪ | ದಾವಣಗೆರೆ | ೫೭ | ೯೪ | ೧೦೮ | ೨೦೨ |
| ೫ | ಧಾರವಾಡ | ೪೩ | ೮೩ | ೮೫ | ೧೬೮ |
| ೬ | ಗದಗ | ೧೧ | ೨೬ | ೧೯ | ೪೫ |
| ೭ | ಗುಲ್ಬರ್ಗ | ೩೧ | ೬೭ | ೬೪ | ೧೩೧ |
| ೮ | ಹಾಸನ | ೧೭ | ೩೪ | ೩೧ | ೬೫ |
| ೯ | ಹಾವೇರಿ | ೫೫ | ೧೧೨ | ೯೫ | ೨೦೭ |
| ೧೦ | ಕಾರವಾರ | ೧೨ | ೨೫ | ೨೩ | ೪೮ |
| ೧೧ | ಕೊಪ್ಪಳ | ೨೨ | ೩೫ | ೩೩ | ೬೮ |
| ೧೨ | ರಾಯಚೂರು | ೧೧ | ೨೩ | ೨೬ | ೪೯ |
| ೧೩ | ಶಿವಮೊಗ್ಗ | ೧೨೦ | ೨೦೮ | ೧೯೨ | ೪೦೦ |
| ೧೪ | ತುಮಕೂರು | ೪ | ೬ | ೧೨ | ೧೮ |
| ೧೫ | ಉಡುಪಿ | ೧ | ೩ | ೨ | ೫ |
| | **ಒಟ್ಟು** | **೪೯೧** | **೮೯೧** | **೮೭೯** | **೧೭೭೦** |

ನಗರ ಪ್ರದೇಶದಲ್ಲಿ ಒಟ್ಟು ೩೪೬ ಕುಟುಂಬಗಳು ನೆಲೆಸಿವೆ ಹಾಗೂ ಜನಸಂಖ್ಯೆ ೧೨೫೫ ಇದೆ. ಇದರಲ್ಲಿ ಪುರುಷರು ೬೩೨ ಜನ ಹಾಗೂ ಮಹಿಳೆಯರು ೬೨೩ ಜನ ಕಂಡುಬರುತ್ತಾರೆ.

ನಗರ ಪ್ರದೇಶದ ಜನಸಂಖ್ಯೆ ಶೇ. ೭೦.೯ ರಷ್ಟಿದ್ದರೆ ಗ್ರಾಮೀಣ ಪ್ರದೇಶದ ಜನಸಂಖ್ಯೆ ಕೇವಲ ೨೯.೧೫ ರಷ್ಟಿದೆ.

ಇಡೀ ರಾಜ್ಯದಲ್ಲಿ ಸಮೀಕ್ಷೆ ಮಾಡಿದಾಗಲೂ ನಮಗೆ ಕೆಲವೊಂದು ಕುಟುಂಬಗಳು ಸಮೀಕ್ಷೆಯಿಂದ ಹೊರಗುಳಿದವು. ಕಾರಣ ಅಲೆಮಾರಿಗಳಾದ ಗೋಸಂಗಿಗಳು ಬೇರೆ ರಾಜ್ಯಗಳಿಗೆ ವಲಸೆ ಹೋಗಿದ್ದರಿಂದ ಆ ಕುಟುಂಬಗಳ ಮಾಹಿತಿ ದೊರೆಯದೇ ಹೋಯಿತು. ಎರಡನೆಯದಾಗಿ ಸಾಮಾಜಿಕ ಅಂತಸ್ಥನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿ

ಕರ್ನಾಟಕ
ಗೋಸಂಗಿ ಸಮುದಾಯದ ನೆಲೆಗಳು



ಬೇರೆ ಜಾತಿಗಳಿಂದ ಗುರುತಿಸಿ ಕೊಳ್ಳುವ ಉದಾಹರಣೆಗೆ ರಜಪೂತ್, ಮರಾಠಿ ಇತ್ಯಾದಿ ಗೋಸಂಗಿಗಳು ಈ ಸಮೀಕ್ಷೆಯಲ್ಲಿ ಸೇರಲು ಅಪೇಕ್ಷಿಸದೇ ಇದ್ದುದರಿಂದಲೂ ಅವರನ್ನು ಸಮೀಕ್ಷೆಯಿಂದ ಹೊರಗಿಡಲಾಗಿದೆ.

**ಕೋಷ್ಟಕ :೨.೩**

**ಗೋಸಂಗಿ ಸಮುದಾಯದ ಗ್ರಾಮೀಣ ಮತ್ತು ನಗರ ಜನಸಂಖ್ಯೆ (೨೦೦೭)**

| ಕ್ರಸಂ. | ವಿವರ | ಕುಟುಂಬ | ಗಂಡು | ಹೆಣ್ಣು | ಒಟ್ಟು |
|---|---|---|---|---|---|
| ೧. | ಗ್ರಾಮೀಣ | ೧೪೫ | ೨೫೯ | ೨೫೭ | ೫೧೬ |
| ೨. | ನಗರ | ೩೪೬ | ೬೩೨ | ೬೨೨ | ೧೨೫೪ |
| | ಒಟ್ಟು | ೪೯೧ | ೮೯೧ | ೮೭೯ | ೧೭೭೦ |

ಕರ್ನಾಟಕ ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಶೇಕಡ ೨೯ ರಷ್ಟು ಜನ ಗ್ರಾಮೀಣ ಪ್ರದೇಶದಲ್ಲಿ ಮತ್ತು ಶೇಕಡ ೭೧ ರಷ್ಟು ನಗರ ಪ್ರದೇಶದಲ್ಲಿ ವಾಸವಾಗಿರುವುದು ಈ ಸಮೀಕ್ಷೆಯಿಂದ ವೇದ್ಯವಾಗುತ್ತದೆ.

**ಗೋಸಂಗಿಗಳ ವಯೋಗುಂಪು**

ಗೋಸಂಗಿಗಳನ್ನು ಐದು ಹಂತಗಳ ವಯೋಗುಂಪುಗಳನ್ನಾಗಿ ವಿಂಗಡಿಸಲಾಗಿದೆ. ಅದರಲ್ಲಿ ೦ ೪ ರಿಂದ ವಯೋಮಾನದ ಗುಂಪು, ೫ ರಿಂದ ೧೭ರ ವಯೋಮಾನದ ಗುಂಪು, ೧೮ ರಿಂದ ೪೦ರ ವಯೋಮಾನದ ಗುಂಪು ಹಾಗೂ ೪೧ ರಿಂದ ೬೦ರ ವಯೋಮಾನದ ಗುಂಪು ಮತ್ತು ೬೧ರ ಮೇಲ್ಪಟ್ಟ ವಯೋಮಾನದ ಗುಂಪುಗಳನ್ನಾಗಿ ಮಾಡಲಾಗಿದೆ.

**ಕೋಷ್ಟಕ: ೨.೪**

**ಗೋಸಂಗಿಗಳ ವಯೋಗುಂಪುವಾರು ಲಿಂಗವಾರು ಜನಸಂಖ್ಯೆ (೨೦೦೭)**

| ವಯಸ್ಸು | ಗಂಡು | ಹೆಣ್ಣು | ಒಟ್ಟು |
|---|---|---|---|
| ೦–೪ | ೬೨ | ೪೯ | ೧೧೧ |
| ೫–೧೭ | ೨೫೫ | ೨೩೮ | ೪೯೩ |
| ೧೮–೪೦ | ೪೦೮ | ೪೨೭ | ೮೩೫ |
| ೪೧–೬೦ | ೧೩೮ | ೧೨೯ | ೨೬೭ |
| ೬೧ ಕ್ಕಿಂತ ಮೇಲ್ಪಟ್ಟು | ೨೬ | ೩೬ | ೬೨ |
| ಒಟ್ಟು | ೮೮೯ | ೮೭೯ | ೧೭೬೬ |

ಕರ್ನಾಟಕ ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ೦–೪ ವಯೋಗುಂಪಿನವರು ಶೇಕಡ ೬ ರಷ್ಟು, ೫–೧೭ ವಯೋಗುಂಪಿನವರು ೨೮ ರಷ್ಟು, ೧೮–೪೦ ವಯೋ

ಗುಂಪಿನವರು ೪೭ ರಷ್ಟು, ೪೧-೬೦ ವಯೋಗುಂಪಿನವರು ೧೫ ರಷ್ಟು ಮತ್ತು ೬೦ ರ ಮೇಲ್ಪಟ್ಟವರು ೪ ರಷ್ಟಿರುವವರು. ಅಂದರೆ ಇವರ ಒಟ್ಟು ಜನಸಂಖ್ಯೆಯಲ್ಲಿ ಶೇಕಡ ೩೮ ರಷ್ಟು ಆಶ್ರಿತ ಗುಂಪಿನವರಿದ್ದಾರೆ. ಇವರಲ್ಲಿ ಶೇಕಡ ೬೨ ರಷ್ಟು ಜನ ಕಾಯಕಾರ್ಹ ಗುಂಪಿರುವುದು.

**ಕುಟುಂಬ ಗಾತ್ರ**

ಗೋಸಂಗಿಗಳ ಕುಟುಂಬಗಳು ಗುಂಪು ಗುಂಪಾಗಿ ನೆಲೆಸುತ್ತವೆ. ಇವರಲ್ಲಿ ಅವಿಭಕ್ತ ಕುಟುಂಬಗಳು ಹಿಂದೆ ಹೆಚ್ಚಾಗಿ ಕಂಡುಬರುತ್ತಿದ್ದರೂ ಇಂದು ಅವುಗಳ ಸ್ಥಾನವನ್ನು ವಿಭಕ್ತ ಕುಟಂಬಗಳು ಆಕ್ರಮಿಸಿಕೊಂಡಿವೆ. ಇಲ್ಲಿ ೧ ರಿಂದ ೪ ರಷ್ಟು ಸಂಖ್ಯೆಯಲ್ಲಿ ಇರುವ ಸದಸ್ಯರ ಕುಟುಂಬಗಳನ್ನು ಚಿಕ್ಕ ಗಾತ್ರದ ಕುಟುಂಬಗಳೆಂದು ೪ ರಿಂದ ೬ರ ಸಂಖ್ಯೆಯಲ್ಲಿರುವ ಸದಸ್ಯರ ಕುಟುಂಬಗಳನ್ನು ಮಧ್ಯಮ ಗಾತ್ರದ ಕುಟುಂಬಗಳೆಂದು ೭ ಕ್ಕಿಂತ ಮೇಲ್ಪಟ್ಟು ಜನಸಂಖ್ಯೆ ಇರುವ ಕುಟುಂಬಗಳನ್ನು ದೊಡ್ಡ ಗಾತ್ರದ ಕುಟುಂಬಗಳೆಂದು ಪರಿಗಣಿಸಲಾಗಿದೆ.

ಧಾರವಾಡ, ಗದಗ, ರಾಯಚೂರು, ತುಮಕೂರು, ಉಡುಪಿಗಳಲ್ಲಿ ಕ್ರಮವಾಗಿ ೪.೦೯, ೪.೨೨, ೪.೪೫, ೫ ಇರುವುದರಿಂದ ಮಧ್ಯಮ ಗಾತ್ರದ ಕುಟುಂಬಗಳು ಕಂಡುಬರುತ್ತವೆ. ಇನ್ನೂಳಿದ ಬೆಂಗಳೂರು ಬಳ್ಳಾರಿ, ಚಿಕ್ಕಮಗಳೂರು, ದಾವಣಗೆರೆ, ಗುಲ್ಬರ್ಗಾ, ಹಾಸನ, ಹಾವೇರಿ, ಕಾರವಾರ, ಕೊಪ್ಪಳ, ಶಿವಮೊಗ್ಗ ಜಿಲ್ಲೆಗಳಲ್ಲಿ ಚಿಕ್ಕ ಗಾತ್ರದ ಗೋಸಂಗಿ ಕುಟುಂಬಗಳು ಕಂಡು ಬರುತ್ತವೆ. ಇವುಗಳ ಹೊರತಾಗಿ ದೊಡ್ಡ ಗಾತ್ರದ ಕುಟುಂಬಗಳು ಈ ಸಮುದಾಯ ಸಮೀಕ್ಷೆಯಲ್ಲಿ ಎಲ್ಲಿಯೂ ಕಂಡು ಬಂದಿರುವುದಿಲ್ಲ. ಗೋಸಂಗಿಗಳ ಸರಾಸರಿ ಕುಟುಂಬ ಗಾತ್ರವು ೩.೬ ರಷ್ಟು ಮಾತ್ರ ಇರುವುದು ತಿಳಿದುಬರುತ್ತದೆ.

**ಲಿಂಗಾನುಪಾತ**

ಪ್ರತಿ ೧೦೦೦ ಪುರುಷರಿಗೆ ಮಹಿಳೆಯರ ಸಂಖ್ಯೆ ಎಷ್ಟೆಂಬುವುದನ್ನು ಗುರುತಿಸುವುದೇ ಲಿಂಗ ಅನುಪಾತವಾಗಿರುತ್ತದೆ. ಗೋಸಂಗಿಗಳಲ್ಲಿ ೧೦೦೦ ಪುರುಷರಿಗೆ ಸರಾಸರಿ ಮಹಿಳೆಯರ ಪ್ರಮಾಣವು ೯೮೬ರಷ್ಟಿದೆ. ಅಂದರೆ ಪುರುಷ ಹಾಗೂ ಮಹಿಳೆಯರ ಮಧ್ಯ ೧೪ರಷ್ಟು ಅಂತರವಿರುವುದು ಕಂಡುಬರುತ್ತದೆ.

**ಕೋಷ್ಟಕ: ೨.೫ ಗೋಸಂಗಿಗಳ ವಯೋಗುಂಪುವಾರು ಲಿಂಗಾನುಪಾತ (೨೦೦೭)**

| ಸಂ. | ಜಿಲ್ಲೆ | ಲಿಂಗಾನುಪಾತ |
|---|---|---|
| ೧ | ಬಳ್ಳಾರಿ | ೯೮೧ |
| ೨ | ಬೆಂಗಳೂರು | ೮೮೨ |
| ೩ | ಚಿಕ್ಕಮಗಳೂರು | ೧೧೬೫ |
| ೪ | ದಾವಣಗೆರೆ | ೧೧೪೮ |

| | | |
|---|---|---|
| ೫ | ಧಾರವಾಡ | ೧೦೨೪ |
| ೬ | ಗದಗ | ೭೩೦ |
| ೭ | ಗುಲ್ಬರ್ಗಾ | ೯೫೫ |
| ೮ | ಹಾಸನ | ೯೧೧ |
| ೯ | ಹಾವೇರಿ | ೮೪೮ |
| ೧೦ | ಕಾರವಾರ | ೯೨೦ |
| ೧೧ | ಕೊಪ್ಪಳ | ೯೪೨ |
| ೧೨ | ರಾಯಚೂರು | ೧೧೩೦ |
| ೧೩ | ಶಿವಮೊಗ್ಗ | ೯೨೩ |
| ೧೪ | ತುಮಕೂರು | ೨೦೦೦ |
| ೧೫ | ಉಡುಪಿ | ೬೬೬ |
| | ಒಟ್ಟು | ೯೮೬ |

ಚಿಕ್ಕಮಗಳೂರು, ದಾವಣಗೆರೆ, ಧಾರವಾಡ, ರಾಯಚೂರು, ತುಮಕೂರುಗಳಲ್ಲಿ ಪುರುಷರು ಪ್ರಮಾಣಕ್ಕಿಂತ ಮಹಿಳೆಯರ ಪ್ರಮಾಣವೇ ಹೆಚ್ಚಾಗಿರುವುದು ಕಂಡುಬರುತ್ತದೆ. ತುಮಕೂರಿನಲ್ಲಿ ಪುರುಷರ ಪ್ರಮಾಣಕ್ಕಿಂತ ಮಹಿಳೆಯರ ಪ್ರಮಾಣ ಎರಡುಪಟ್ಟು ಹೆಚ್ಚಾಗಿರುವುದು ಹಾಗೆ ರಾಯಚೂರು, ಧಾರವಾಡ, ದಾವಣಗೆರೆ, ಚಿಕ್ಕಮಗಳೂರುನಲ್ಲಿ ೧೧೩೦, ೧೧೪೮, ೧೧೬೫ರಷ್ಟು ಹೆಚ್ಚಿನ ಪ್ರಮಾಣದಲ್ಲಿ ಮಹಿಳೆಯರು ಕಂಡುಬರುತ್ತಾರೆ.

ಇನ್ನೂಳಿದಂತೆ ಬೆಂಗಳೂರು, ಬಳ್ಳಾರಿ, ಗದಗ, ಗುಲಬರ್ಗಾ, ಹಾಸನ, ಹಾವೇರಿ, ಕಾರವಾರ, ಕೊಪ್ಪಳ, ಶಿವಮೊಗ್ಗ, ಉಡುಪಿಗಳಲ್ಲಿ ಪುರುಷರ ಪ್ರಮಾಣಕ್ಕಿಂತ ಮಹಿಳೆಯರ ಪ್ರಮಾಣ ಕಡಿಮೆಯಾಗಿ ಕಂಡುಬರುತ್ತದೆ.

೩

# ಸ್ಥಳಾವರಣ ಮತ್ತು ಬ್ರಹ್ಮಾಂಡದ ಪರಿಕಲ್ಪನೆ

ಮನೆ : ಗೋಸಂಗಿ ಸಮುದಾಯದವರು ಊರಿಂದ ಊರಿಗೆ ನೆಲೆಯಿಂದ ನೆಲೆಗೆ ಗುಳೆ ಹೋಗುತ್ತಿದ್ದರಿಂದ ಒಂದೆಡೆ ನೆಲೆಸಲು ಅವಕಾಶವೇ ಇರುತ್ತಿರಲಿಲ್ಲ. ಏಕೆಂದರೆ ಇವರು ಅಲೆಮಾರಿಗಳು ತಮ್ಮ ಜೀವನೋಪಾಯಕ್ಕೆ ಎಲ್ಲಿ ಅನುಕೂಲವಿರುತ್ತಿತ್ತೋ ಅಲ್ಲಿಯವರಗೆ ಮಾತ್ರ ಇವರು ಆ ಜಾಗದಲ್ಲಿರುತ್ತಿದ್ದರು. ನಂತರ ಪುನಃ ಬೇರೆ ಬೇರೆ ನೆಲೆಯನ್ನು ಹುಡಿಕಿಕೊಂಡು ಅಲೆದಾಡುತ್ತಿದ್ದರು. ಹೀಗಾಗಿ ಇವರಿಗೆ ಮನೆಗಳನ್ನು ಕಟ್ಟಿಕೊಂಡು, ಇದು ನಮ್ಮ ಮನೆ, ಇದೇ ಮನೆಯಲ್ಲಿ ವಾಸ ಮಾಡಬೇಕು ಎಂಬ ಚಿಂತೆ ಇವರಿಗಿರುತ್ತಿರಲಿಲ್ಲ. ಹೀಗಾಗಿ ಇವರು ಮನೆಗಳನ್ನು ಕಟ್ಟುವ ವಿಚಾರವೇ ಮಾಡುತ್ತಿರಲಿಲ್ಲ. ಇವರಿಗೆ ಭೂಮಿಯೇ ಹಾಸಿಗೆ ಆಕಾಶವೇ ಹೊದಿಕೆಯಾಗಿರುತ್ತಿತ್ತು. ಇವರು ಸಾಮಾನ್ಯವಾಗಿ ಗುಡಾರಗಳಲ್ಲಿ ಗುಡಿಸಲುಗಳಲ್ಲಿ ವಾಸ ಮಾಡುತ್ತಿದ್ದರು. ಆಗ ಇವರು ಹಳೇ ಬಟ್ಟೆಗಳನ್ನೆಲ್ಲ ಕೂಡಿಟ್ಟುಕೊಂಡು ಅದರಿಂದ ಕೌದಿಯನ್ನು ಹೊಲಿದು ಅದರಿಂದಲೇ ತಮ್ಮದೇ ಆದ ವಿನ್ಯಾಸದಲ್ಲಿ ಈ ಡೇರೆಗಳನ್ನು ತಯಾರಿಸಿಕೊಂಡು ವಾಸ ಮಾಡುತ್ತಿದ್ದರು.

**ಕೊಟ್ಟಿಗೆ, ಗಲ್ಲಿ, ಎಲ್ಲೆಕಟ್ಟು :** ಗೋಸಂಗಿ ಸಮಾಜದ ಜನರು ತಮ್ಮ ಸಂಗಾತಿಗಳೆಂದು ಗೋವು, ಕೋಳಿ, ಕುರಿಗಳನ್ನು ಸಾಕಿಕೊಂಡಿರುತ್ತಿದ್ದರು ಗೋವುಗಳೆಂದರೆ ಇವರಿಗೆ ಪಂಚಪ್ರಾಣ ಊರಿಂದ ಊರಿಗೆ ಅಲಿಯುವಂತಹ ಸಂದರ್ಭದಲ್ಲಿ ತಮ್ಮ ಸಕಲ ವಸ್ತುಗಳನ್ನು ಮೂಟೆಕಟ್ಟಿ ಇವುಗಳ ಮೇಲೆ ಹೇರುತ್ತಿದ್ದರು. ತಮ್ಮ ಮಕ್ಕಳನ್ನು ಸಹ ಇವುಗಳ ಮೇಲೆ ಕೂರಿಸಿಕೊಂಡು ಪ್ರಯಾಣ ಮಾಡುತ್ತಿದರು. ಆದ್ದರಿಂದ ಇವರು ತಮ್ಮ ಪ್ರಾಣಿಗಳನ್ನು ತಾವು ನೆಲೆಸಿರುವ ಸ್ಥಳದಲ್ಲಿ ಗೂಟಗಳನ್ನು ನೆಲದಲ್ಲಿ ಹೊಡೆದು ಆ ಗೂಟಗಳಿಗೆ ಹಗ್ಗದಿಂದ ಕಟ್ಟಿಹಾಕುತ್ತಿದ್ದರು. ಇವುಗಳಿಗೆ ತಾವು ಇರುವ ಜಾಗವೇ ಕೊಟ್ಟಿಗೆಯಾಗಿರುತ್ತಿತ್ತು. ಪ್ರತ್ಯೇಕವಾದ ಕೊಟ್ಟಿಗೆ ಇವುಗಳಿಗಿರುತ್ತಿರಲಿಲ್ಲ.

ಗಲ್ಲಿಯ ವಿಷಯವಾಗಿ ವಿಚಾರಿಸಿದಾಗ ಮೊದಲೇ ಅಲೆಮಾರಿಗಳಾದ ಇವರು ಸಾಲಾಗಿ ಮನೆಗಳನ್ನು ಅಥವಾ ಗುಡಾರಗಳನ್ನು ತಯಾರಿಸಿಕೊಂಡು ವಾಸ ಮಾಡುತ್ತಿದ್ದ ಇವರು ತಮ್ಮ ಗುಡಾರಗಳನ್ನು ತಮ್ಮ ಇಚ್ಛೆಯಂತೆ ಎಲ್ಲಿ ಬೇಕಾದರೂ ತಯಾರಿಸಿ ಕೊಳ್ಳುತ್ತಿದ್ದರು. ಇವರ ಗುಂಪುಗಳಲ್ಲಿ ಗಲ್ಲಿಯಂಬ ಪದಕ್ಕೆ ಅರ್ಥವೇ ಇರುತ್ತಿರಲಿಲ್ಲ.

ಇವರು ಕಟ್ಟುಕೊಳ್ಳುತ್ತಿದ್ದ ಗುಡಾರಗಳನ್ನು ಇವರ ಇಚ್ಛಾನುಸಾರ ಕಟ್ಟಿಕೊಳ್ಳುತ್ತಿದ್ದರೇ ವಿನಹ ಅವರಿಗೆ ಎಲ್ಲೆ ಆಗಲಿ ಬೇಲಿಯಾಗಲಿ ಯಾವುದು ಇರುತ್ತಿರಲಿಲ್ಲ, ಯಾವ ಸ್ಥಳದಲ್ಲಿ ಗುಡಾರ ಕಟ್ಟಿಕೊಳ್ಳುತ್ತಿದ್ದರೋ ಅದರ ಸುತ್ತಲೂ ಮಣ್ಣಿನಿಂದ ಕಟ್ಟೆಕಟ್ಟಿ ಯಾವ ಕ್ರಿಮೀಕೀಟಗಳು ಮತ್ತು ನೀರು ಒಳಗೆ ಬರದ ಹಾಗೆ ನಿಯಂತ್ರಿಸಿಕೊಳ್ಳುತ್ತಿದ್ದರು.

### ಮನೆಗಳ ಸ್ವರೂಪ

ಕರ್ನಾಟಕದಲ್ಲಿ ೪೯೧ ಗೋಸಂಗಿ ಕುಟುಂಬಗಳು ಕಂಡುಬರುತ್ತಿವೆ. ಇಂದು ಈ ಸಮುದಾಯದಲ್ಲಿ ಅಲೆಮಾರಿತನ ಕಡಿಮೆಯಾಗಿರುವುದರಿಂದ ಗುಡಾರಗಳ ಸಂಖ್ಯೆಗೂ ಕಡಿಮೆಯಾಗುತ್ತಿದೆ. ಕರ್ನಾಟಕದಲ್ಲಿ ಸಮೀಕ್ಷೆ ಮಾಡಿದಾಗ ದೊರೆತ ಮನೆಗಳ ಕುರಿತು ಮಾಹಿತಿ ಹೀಗಿದೆ.

**ಕೋಷ್ಟಕ: ೩.೧ ಗೋಸಂಗಿಗಳ ಮನೆಗಳ ಸ್ವರೂಪ (೨೦೦೭)**

| ಕ್ರಸಂ. | ವಿವರ | ಸಂಖ್ಯೆ |
|---|---|---|
| ೦೧ | ಆಶ್ರಯ ಮನೆ | ೧೧೦ |
| ೦೨ | ಗುಡಾರ | ೦೫ |
| ೦೩ | ಗುಡಿಸಲು | ೦೭ |
| ೦೪ | ಟಿನ್ | ೪೩ |
| ೦೫ | ಡಾಬಾ | ೨೪ |
| ೦೬ | ಆರ್.ಸಿ.ಸಿ | ೪೪ |
| ೦೭ | ಹಂಚಿನಮನೆ | ೮೬ |
| ೦೮ | ಬಾಡಿಗೆ | ೧೭೨ |
| | ಒಟ್ಟು | ೪೯೧ |

ಸರ್ಕಾರದಿಂದ ಕೊಡಲ್ಪಟ್ಟ ಆಶ್ರಯಮನೆಗಳು ೧೧೦ ಇವೆ ಗುಡಾರಗಳ ಸಂಖ್ಯೆ ಕೇವಲ ೫ ಇವೆ. ಹಾಗೇ ಗುಡಿಸಲುಗಳು ೦೭ ಮತ್ತು ಟಿನ್ ಮನೆಗಳು ೪೩ ಇವೆ. ಡಾಬಾ ಮನೆಗಳು ೨೪ ಇವೆ.

### ಕ್ರಿಯಾವಿಧಿಯ ಸ್ಥಳಾವರಣ

ಕ್ರಿಯಾವಿಧಿಯ ಸ್ಥಳಾವರಣವು ಮೂರು ರೀತಿಯಲ್ಲಿದೆ. ಒಂದನೆಯದಾಗಿ ನಿತ್ಯ ಬದುಕಿಗೆ ಸಂಬಂಧಿಸಿದ ಸ್ಥಳಾವರಣ, ಇದರಲ್ಲಿ ಈ ಸಮುದಾಯದವರು ತಮ್ಮ ಕುಟುಂಬದವರಿಗೆ ಆಹಾರ ತಯಾರಿಸುವುದಕ್ಕಾಗಿ ಅಡುಗೆ ಮಾಡುವುದಕ್ಕೆ ಸ್ನಾನ ಮಾಡುವುದಕ್ಕೆ, ಊಟ ಉಪಚಾರ ಮಾಡುವುದಕ್ಕೆ ಮುಂತಾದವುಗಳು ನಿತ್ಯ ಬದುಕಿಗೆ ಸಂಬಂಧಿಸಿದ ಕ್ರಿಯಾವಿಧಿಯ ಸ್ಥಳಾವರಣವಾಗಿರುತ್ತದೆ

ಎರಡನೆಯದಾಗಿ ವಿಧಿ-ನಿಷೇಧಗಳಿಗಾಗಿ ರೂಪಿಸಿಕೊಂಡ ಸ್ಥಳಾವರಣವಾಗಿರುತ್ತದೆ,

ಅಂದರೆ ಹೆರಿಗೆ ಆದಾಗ ಸೂತಕ ಕ್ರಿಯೆಗಳನ್ನು ಮಾಡುವಂತ ಸ್ಥಳಾವರಣ, ಋತುಮತಿ ಯಾದಾಗ ಸೂತಕ ಕ್ರಿಯೆಗಳನ್ನು ನೆರವೇರಿಸುವ ಸ್ಥಳಾವರಣ ಹಾಗೂ ಸಾವಿಗೆ ಸಂಬಂಧಿಸಿದ ಸೂತಕ ಕ್ರಿಯೆಗಳನ್ನು ಆಚಾರಿಸಲು ಬೇಕಾಗುವ ಸ್ಥಳಾವರಣ

ಮೂರನೆಯದಾಗಿ ದೈವಗಳಿಗೆ ಸಂಬಂಧಿಸಿದ ಸ್ಥಳಾವರಣ. ಗೋಸಂಗಿ ಸಮುದಾಯದ ಜನತೆಗೆ ದೈವಗಳ ಮೇಲೆ ತುಂಬ ನಂಬಿಕೆಯಿದೆ. ಹೆಚ್ಚಾಗಿ ಹೆಣ್ಣು ದೇವತೆಗಳನ್ನು ಪೂಜಿಸುತ್ತಾರೆ. ಉದಾ: ಅವರು ವಾಸ ಮಾಡುವ ಬಿಡಾರದಲ್ಲಿ ಪ್ರತ್ಯೇಕವಾಗಿ ದೇವರಿಡಲಿಕ್ಕೆ ಸ್ಥಳಾವಕಾಶ ಮಾಡಿರುತ್ತಾರೆ. ಆ ಸ್ಥಳದಲ್ಲಿ ದೇವಿಯನ್ನು ಕೂರಿಸುತ್ತಾರೆ, ಹೇಗೆಂದರೆ ಒಂದು ತಂಬಿಗೆ ನೀರು ತುಂಬಿ ಅದರಲ್ಲಿ ಐದು ವೀಳೆದೆಲೆಯನ್ನಿರಿಸಿ ಅದರಲ್ಲಿ ಒಂದು ತೆಂಗಿನ ಕಾಯಿಯನ್ನುಟ್ಟು ಅದಕ್ಕೆ ಬೇವಿನ ಥಳವನ್ನಿಡುತ್ತಾರೆ ಇದಕ್ಕೆ ಕಳಸ ಎನ್ನುತ್ತಾರೆ ಈ ಕಳಸಕ್ಕೆ ಗಂಧ, ಕುಂಕುಮ, ಅರಿಶಿನ, ಪುಷ್ಪಗಳಿಂದ ಅಲಂಕರಿಸಿ ಪೂಜಿಸುತ್ತಾರೆ, ಹಣ್ಣುಕಾಯಿಗಳನ್ನಿಟ್ಟು ನೈವೇದ್ಯ ಮಾಡುತ್ತಾರೆ ಕೆಲವರು ಅವರ ಮನೆ ದೇವರ ಫೋಟೋಗಳನ್ನಿಟ್ಟು ಪೂಜಿಸುತ್ತಾರೆ ಇನ್ನು ಕೆಲವರು ಬೇವಿನ, ಬನ್ನಿಯ ಮರಗಳಲ್ಲಿರುವ ದೇವರನ್ನು ಪೂಜಿಸುತ್ತಾರೆ. ಕೆಲವರು ಹೊನ್ನಂಬರಕೆ ಅಂದರೆ ತಂಗಡಿಕೆ ಗಿಡವನ್ನೇ ದೇವರೆಂದು ಪೂಜಿಸುವುದೂ ಉಂಟು. ಹೀಗೆ ದೈವ ಗಳಿಗೆ ಸಂಬಂಧಿಸಿದ ಸ್ಥಳಾವರಣವು ಕೆಲವೊಮ್ಮೆ ಡೇರೆ,ಗುಡಿಸಲುಗಳಾದರೆ ಇನ್ನೂ ಕೆಲವೊಮ್ಮೆ ಗಿಡ ಮರಗಳಿರುವ ಜಾಗಗಳಾಗುದೂ ಉಂಟು.

**ಬ್ರಹ್ಮಾಂಡ ಪರಿಕಲ್ಪನೆ:**ಭೂಮಿ ಹುಟ್ಟುವ ಪೂರ್ವದಲ್ಲಿ ದೇವ ಲೋಕ ಒಂದೇ ಇದ್ದಿತು, ದೇವಲೋಕದೊಳಗಿರುವ ಬ್ರಹ್ಮನು ಒಮ್ಮೆ ಭೂಲೋಕ ಹೇಗಿದೆ ಎಂದು ನೋಡಿಕೊಂಡು ಹೋಗಲು ಬಂದನು, ಭೂಲೋಕವು ಸಂಪೂರ್ಣವಾಗಿ ಜಲವೃತ್ತ ವಾಗಿತ್ತು, ಜಲವೃತ್ತಗೊಂಡ ಭೂಮಿಗೆ ಒಡೆಯನೊಬ್ಬನನ್ನು ಸೃಷ್ಟಿಗೊಳಿಸಿ ಬಿಡಬೇಕೆಂದು ನಿಶ್ಚೆಯಿಸಿ ಋಷಿಮುನಿಯೊಬ್ಬನನ್ನು ಭೂಲೋಕಕ್ಕೆ ಕಳಿಸಿದ, ಆಗ ಭೂಲೋಕಕ್ಕೆ ಬಂದ ಋಷಿಮುನಿಯು ನೀರೇ ನಿರಂಕಾರವಾದ ಭೂಲೋಕ ನೋಡಿ ಹೆದರಿಬಿಟ್ಟು ಅಲ್ಲಿರಲಾರದೆ ಹಿಂದಿರುಗಿಬಿಟ್ಟ, ಆಗ ಬ್ರಹ್ಮನು ಜಾಂಬಮುನಿ ಎಂಬ ಮಗನನ್ನು ಸೃಷ್ಟಿಸಿ ಭೂಲೋಕಕ್ಕೆ ಕಳಿಸಿದ, ಭೂಲೋಕಕ್ಕೆ ಬಂದ ಜಾಂಬಮುನಿಯು ಮೊದಲಿಗೆ ಭೂಮಿಯ ಮೇಲಿದ್ದ ನೀರನ್ನು ಸ್ವಲ್ಪ ಆಚೀಚೆ ಸರಿಸಿದ, ಆಚೀಚೆ ನೀರು ಸರಿಸಿದ ಮೇಲೆ ಭೂಮಿ ಸ್ವಲ್ಪ ಕಂಡುಬಂದಿತು, ಆ ಭೂಮಿಯನ್ನು ನೆಲೆಯಾಗಿಸಿಕೊಂಡ ಜಾಂಬುಮುನಿ ಮೊದಲಿಗೆ ನೂರು ಮಕ್ಕಳನ್ನು ಸೃಷ್ಟಿಗೊಳಿಸಿದ, ಅಂತಹ ನೂರು ಮಕ್ಕಳಿಗೆ ಮೊದಲಾಗಿ ಜನಿಸಿದವನೇ ಗೋಸಂಗಿ, ಭೂಮಿಯ ಮೇಲೆ ಜೀವರಾಸಿ ಹುಟ್ಟುವುದಕ್ಕೆ ಮೊದಲೆ, ಸೂರ್ಯ ಚಂದ್ರರು ಹುಟ್ಟುವುದಕ್ಕೆ ಮೊದಲೇ ಹುಟ್ಟಿದವನು ಗೋಸಂಗಿ. ಗೋಸಂಗಿ ಹುಟ್ಟಿದ ಮೇಲೆ ಸಹಸ್ರಾರು ಜೀವಿಗಳು, ಕುಲ ಹದಿನೆಂಟು ಜಾತಿಗಳು ಭೂಮಿಯ ಮೇಲೆ ಹುಟ್ಟಿದವಂತೆ, ಗೋಸಂಗಿಗಳ ಮೂಲ ಪುರುಷ ಜಾಂಬಮುನಿ ಎಂದು ಗೋಸಂಗಿಗಳು ಹೇಳುತ್ತಾರೆ.

## ೪

# ಬಂಧುತ್ವ ಮತ್ತು ವಿವಾಹ

ಮಾನವನ ಬದುಕಿನ ಅತೀ ಮುಖ್ಯ ಘಟಕ ವಿವಾಹವಾಗಿದೆ. ಮಾನವನು ತನ್ನದೇ ಆದ ರೀತಿಯಲ್ಲಿ ಸಂಬಂಧಗಳನ್ನು ಏರ್ಪಡಿಸಿಕೊಳ್ಳುತ್ತಾನೆ. ಅದನ್ನು ಮನುಷ್ಯನೇ ಮೌಖಿಕವಾಗಿ ರೂಪಿಸಿಕೊಂಡ ಸಾಮಾಜಿಕ ಸಂವಿಧಾನ ಎಂದು ಬೇಕಾದರೆ ಕರೆಯಬಹುದು. ಯಾವುದೇ ಒಂದು ಸಮುದಾಯವು ಬಂಧುತ್ವವನ್ನು ಮಾಡುವಾಗ ಹಲವು ಸಾಮಾಜಿಕ ಕಟ್ಟಲೆಗಳಿಗೆ ಒಳಗಾಗಬೇಕಾಗುವುದು. ಅದಕ್ಕಾಗಿಯೇ ಬಹುಶಃ ಕುಲ, ಗೋತ್ರ, ಬೆಡಗು ಮುಂತಾದವುಗಳನ್ನು ರೂಪಿಸಿಕೊಂಡಿರುವನು. ಇಲ್ಲಿ ಗೋಸಂಗಿಗಳಲ್ಲಿರುವ ಬಂಧುತ್ವ ಹಾಗೂ ವಿವಾಹಗಳು ಹೇಗೆ ನಡೆಯುತ್ತದೆ ಎಂದು ನೋಡುವ ಸಣ್ಣ ಪ್ರಯತ್ನ ಮಾಡಲಾಗಿದೆ.

### ಕುಲ, ಬಳಿ, ಬೆಡಗು

ಗೋಸಂಗಿ ಸಮುದಾಯದಲ್ಲಿ ಬೆಡಗುಗಳನ್ನು ಕುಲಗಳೆಂದು ಕರೆಯುತ್ತಾರೆ. ಈ ಸಮುದಾಯದಲ್ಲಿ ೨೫ ಬೆಡಗುಗಳಿವೆ. ಅವುಗಳು ಯಾವುವೆಂದರೆ ೧) ಭಾಮ್ಮ್ಯ, ೨)ಭುವನವರ್, ೩)ಚಾವಡೆ, ೪)ಚವ್ಹಾಣ್, ೫) ದಿಲ್ಲಿವಾಲ್ ೬) ದೇವಡ, ೭) ದಾಂಧು, ೮) ಗೇಲೋತ್, ೯) ಹೋಂಸ್, ೧೦) ಜಾಧವ್, ೧೧) ಜಾಟ್, ೧೨ ಕಾಳ್ಕ ೧೩)ಕೊತ್ವಾಲ್, ೧೪)ಕೋಳಿ, ೧೫) ಖತ್ರಿ, ೧೬) ಮೇಣ್ಯ, ೧೭) ಮಚ್ಚರ್, ೧೮) ಮುಣಿಯಾಣಿ ೧೯) ಪವಾರ್, ೨೦)ಪಡಿಯಾರ್, ೨೧) ರಾಠೋಡ್, ೨೨) ಸಿಂಧೆ, ೨೩) ಸಾಳಂಕೆ, ೨೪) ಸಾಂಗಡ್, ೨೫) ವಾಡೇಲ್.

ಗೋಸಂಗಿಗಳು ಸಾಮಾನ್ಯವಾಗಿ ವಿಭಿನ್ನ ಬೆಡಗುಗಳು ಇದ್ದಾಗ ಮಾತ್ರ ಹೆಣ್ಣು ಗಂಡು ಕೊಡು ಕೊಳ್ಳುವುದು, ಅಂದರೆ ಮದುವೆ ಮಾಡುತ್ತಾರೆ. ಸಜಾತಿ ಕುಲಗಳ ಮಧ್ಯ ವೈವಾಹಿಕ ಸಂಬಂಧಗಳು ಏರ್ಪಡುವುದಿಲ್ಲ.

ಪ್ರತಿಯೊಂದು ಬೆಡಗುಗಳು ತಮ್ಮ ಕುಲಕ್ಕೆ ಸಂಬಂಧಸಿದಂತೆ ತಮ್ಮ ಮನೆ ದೇವರು ಅಥವಾ ಆರಾಧ್ಯ ದೈವಗಳನ್ನು ಆರಾಧಿಸುವ ಕ್ರಮ ಭಿನ್ನ ಭಿನ್ನವಾಗಿರುತ್ತದೆ. ಒಂದು ಕುಲದವರು ವೆಂಕಟೇಶನ ಆರಾಧಕರಾದರೆ ಇನ್ನೊಂದು ಬೆಡಗಿನವರ ಕುಲದೈವ ಮೈಲಾರವಾಗಿರುತ್ತದೆ, ಹೀಗೆ ಅವರ ಆಚರಣೆಗಳ ಮೂಲಕ ಇವರು ಇಂತಹ ಕುಲ

(ಬೆಡಗು)ಕ್ಕೆ ಸೇರಿದವರು ಎಂದು ಸುಲಭವಾಗಿ ಗುರುತಿಸಬಹುದು. ಇಲ್ಲಿ ನಮೂದಿಸಿರುವ ಬೆಡಗುಗಳ ಸ್ಥಾನಮಾನವು ಸಮುದಾಯದಲ್ಲಿ ಹೇಗಿದೆ ಎನ್ನುವ ಸಂಕ್ಷಿಪ್ತ ವಿವರವನ್ನು ಇಲ್ಲಿ ನೀಡಲಾಗಿದೆ.

**ಸಿಂಧೆ :** ಈ ಮನೆತನದವರು ಈ ಸಮಾಜದ ಯಜಮಾನಿಕೆಯನ್ನು ಅಂದರೆ ಕಟ್ಟಿಮನೆ ಗೌಡರ ಮನೆತನದ ಸ್ಥಾನವನ್ನು ಹೊಂದಿರುತ್ತಾರೆ.

**ಜಾಟ್ :** ಇವರು ಹೆಚ್ಚಾಗಿ ಕುರಿ, ಮೇಕೆ, ಆಡುಗಳನ್ನು ಸಾಕುತ್ತಿದ್ದರು. ಆದ್ದರಿಂದ ಇವರಿಗೆ ಜಾಟ್ ಎಂಬ ಹೆಸರು ಬಂದಿತು.

**ಮೇಣ್ಯ :** ಕಾಡಿನಲ್ಲಿರುವ ಹಕ್ಕಿ ಪಕ್ಷಿಗಳ ಬೇಟೆ ಇವರ ಪ್ರಮುಖ ಕಸುಬು ಆಗಿತ್ತು. ಉದಾ: ಗೌಜ ಗೊರವಂಕ [ಮೇಣ್ಯ] ಬೆಳವ ಮುಂತಾದ ಪಕ್ಷಿಗಳ ಶಿಕಾರಿ ಮಾಡುತ್ತಿದ್ದ ಕಾರಣ ಇವರನ್ನು ಮೇಣ್ಯ ಎಂದು ಕರೆದರು.

**ಕೋಳಿ :** ಈ ಮನೆತನದವರು ಹೆಚ್ಚಾಗಿ ಕೋಳಿಗಳನ್ನು ಸಾಕಿ ಜೀವನ ಸಾಗಿಸುತ್ತಿದ್ದರು.

**ಭುವನವರ್ :** ಇವರು ಸಮುದಾಯದ ಗುರುಗಳಾಗಿದ್ದರು. ಭಕ್ತರ ಬೇಡಿಕೆಯನ್ನು ನೆರವೇರಿಸುವುದು, ಹಳ್ಳಿ ಹಳ್ಳಿಗಳಿಗೂ ಹೋಗಿ ದೇವಸ್ಥಾನ ಅಥಾವ ಚಾವಡಿಗಳಲ್ಲಿ ಬೀಡುಬೀಡುತ್ತಿದ್ದರು, ಯಾರ ಮನೆಗಳಲ್ಲೂ ರಾತ್ರಿ ತಂಗುತ್ತಿರಲಿಲ್ಲ ಹೀಗಾಗಿ ಇವರಿಗೆ ಭುವನವರ್ ಎಂದು ಕರೆದರು.

**ಚಾವಡೆ:** ಹಿರಿಯರ ಮಾಹಿತಿ ಪ್ರಕಾರ ರಾಜಸ್ಥಾನ ಮತ್ತು ಮಹರಾಷ್ಟ್ರದಲ್ಲಿದ್ದ ಗೋಸಂಗಿಗಳಲ್ಲಿ ಚಾವಡೆ ಮನೆತನವವರಿದ್ದರು, ಅಲ್ಲಿಯ ರಾಜರುಗಳು ಇವರಿಗೆ (ಕಾವಲು) ಗಸ್ತು ತಿರುಗುವ ಕೆಲಸವನ್ನು ಕೊಟ್ಟರು. ಇವರು ಕೈಯಲ್ಲಿ [ದಂಡ] ಕೋಲನ್ನು ಹಿಡಿದು ಸೊಂಟಕ್ಕೆ ಗಂಟೆಗಳಿರುವ ಪಟ್ಟಿಯನ್ನು ಕಟ್ಟಿಕೊಂಡು ಗಂಟೆಗಳ ಶಬ್ದವನ್ನು ಮಾಡುತ್ತ ಗಸ್ತು ತಿರುಗುತ್ತಿದ್ದರು. ಸ್ವಲ್ಪವೇಳೆ ವಿಶ್ರಾಂತಿಗಾಗಿ ಚಾವಡಿಗಳಲ್ಲಿ ಕುಳಿತುಕೊಂಡು ವಿಶ್ರಾಂತಿ ಪಡೆಯುತ್ತಿದ್ದರು. ಹೀಗಾಗಿ ಈ ಬೆಡಗಿಗೆ ಚಾವಡೆ ಎಂದು ಕರೆದಿರುತ್ತಾರೆ.

೧. ಗೋಸಂಗಿ ಜಾತಿಯಲ್ಲಿರುವ ಬೆಡಗುಗಳಲ್ಲಿ ಭುವನವರ್ ಬೆಡಗಿಗೆ ದಿಲ್ಲಿವಾಲ ಎಂದು ಹೇಳುವ ಪ್ರತೀತಿ ಇದೆ.

೨. ಕೊತ್ವಾಲ್ ಬೆಡಗಿಗೂ ಸಾಳಂಕಿ ಎಂದು ಸಹ ಕರೆಯುತ್ತಾರೆ.

ಇತ್ತೀಚಿನ ದಿನಗಳಲ್ಲಿ ಹೆಚ್ಚಾಗಿ ಬೇರೆ ಬೇರೆ ಸಂಬಂಧಗಳಲ್ಲಿ ಆಸಕ್ತಿ ತೋರಿಸುತ್ತಿರುವರು. ವಂಶಪಾರಂಪರ್ಯವಾಗಿ ಸಂಬಂಧಗಳನ್ನು ಹುಡುಕುವುದು, ಮದುವೆಗಳನ್ನು ಮಾಡುವ ಪದ್ಧತಿ ಇತ್ತೀಚೆಗೆ ಕಡಿಮೆಯಾಗುತ್ತಿದೆ. ಗೋಸಂಗಿಗಳನ್ನು ಮುಖ್ಯವಾಗಿ ಮೂರು ಗುಂಪುಗಳಾಗಿ ವಿಂಗಡಿಸುತ್ತಾರೆ. ೧. ಗೌಡರ ಮನೆತನ ೨. ರೈತರ ಮನೆತನ ೩. ಭಾಟ್ ಮನೆತನವೆಂದಿದೆ. ಪ್ರತಿಯೊಂದು ಗ್ರಾಮದಲ್ಲೂ ಈ ಪದ್ಧತಿಯಿತ್ತು. ಯಾವುದೇ ಗುಂಪಿನಲ್ಲಾಗಲಿ ಏನೇ ಸಮಸ್ಯೆಗಳು ಬಂದರೂ ಹಿರಿಯ ಮುಖಂಡ ಭಾಟ್‌ನನ್ನು ಕರೆದು ಪಂಚಾಯತಿ ಸೇರಿಸಲು ಹೇಳುತ್ತಿದ್ದರು. ಭಾಟ್ ಮನೆತನದ

ಮುಖಂಡ ಆ ಪ್ರದೇಶದಲ್ಲಿರುವ ಎಲ್ಲಾ ಕುಲದವರಿಗೂ ಬೇಟಿ ಮಾಡಿ ಈ ದಿನ ಪಂಚಾಯತಿ ಇದೆ. ಎಲ್ಲರೂ ಇಂತಹ ಕಡೆ ಸೇರಬೇಕು ಎಂದು ಹೇಳಿ ಬರುತ್ತಿದ್ದನು, ಅದೇ ರೀತಿ ರೈತರು ಇನ್ನಿತರರು ಗೊತ್ತಾದ ಸ್ಥಳದಲ್ಲಿ ಸೇರುತ್ತಿದ್ದರು, ಗೋಸಂಗಿಗಳಲ್ಲಿ ಅನೇಕ ಬೆಡಗುಗಳಿರುವವು. ಇವರು ಅಲೆಮಾರಿ ಗುಂಪಿಗೆ ಸೇರಿದವರು

**ಗೌಡ, ರೈತ ಮತ್ತು ಭಾಟ್ ಅವುರುಗಳ ಕಾರ್ಯಗಳು**

೧. ಗೌಡರ ಮನೆತನಕ್ಕೆ ಕಟ್ಟೆಮನೆ ಗೌಡ ಅಥವಾ ಹಿರಿಯನೆಂದು ಕರೆಯುತ್ತಾರೆ. ಈ ಹಿರಿಯರಿಗೆ ಬೇರೆಯವರಲ್ಲರೂ ಬಹಳ ಗೌರವ ನೀಡುತ್ತಾರೆ. ಈತ ಆ ಗುಂಪಿಗೆ ಯಾಜಮಾನನಾಗಿರುತ್ತಾನೆ. ಸಮುದಾಯದಲ್ಲಿ ಬರುವ ಅನೇಕ ತೊಡರುಗಳು ಹಾಗು ತಂಟೆ ತಕರಾರುಗಳು, ಬಡಿದಾಟ, ಜಗಳ, ಮುಂತಾದವುಗಳನ್ನು ಬಗೆಹರಿಸುವಲ್ಲಿ ಇವರದು ಪ್ರಮುಖ ಸ್ಥಾನದ್ದಾಗಿರುತ್ತದೆ. ಸಾಮಾನ್ಯವಾಗಿ ಇವರು ಸಿಂಧೆ, ಚವ್ಹಾಣ್ ಮುಂತಾದ ಬೆಡಗಿನವರಾಗಿರುತ್ತಾರೆ.

೨.ಗೌಡರನ್ನು ಹೊರತುಪಡಿಸಿ ಉಳಿದವರೆಲ್ಲರೂ ರೈತ ಪಂಗಡಕ್ಕೆ ಸೇರಿದವ ರಾಗಿರುತ್ತಾರೆ. ಗೌಡರ ನಂತರದ ಸ್ಥಾನ ಇವರದಾಗಿರುತ್ತದೆ. ಕೋಳಿ, ಮೇಣೆ, ಚಾವಡೆ ಮುಂತಾದ ಬೆಡಗಿನವರಾಗಿರುತ್ತಾರೆ,

೩.ಭಾಟ್‌ಗೆ ಸಮುದಾಯದಲ್ಲಿ ಕೊನೆಯ ಸ್ಥಾನವನ್ನು ನೀಡಲಾಗಿದೆ; ಸಮುದಾಯ ದಲ್ಲಿ ನಡೆಯುವ ಎಲ್ಲಾ ರೀತಿಯ ಶುಭ, ಅಶುಭ ಕಾರ್ಯಗಳು, ಜಾತಿಪಂಚಾಯತಿ, ನ್ಯಾಯ ತೀರ್ಮಾನಗಳು ನಡೆಯುವ ಸಂದರ್ಭಗಳಲ್ಲಿ ಎಲ್ಲಾ ಕುಟುಂಬ ವರ್ಗಗಳಿಗೂ ಗೌಡರ ಅನುಮತಿಯಂತೆಯೇ ಹೋಗಿ ವಿಷಯವನ್ನು ಮುಟ್ಟಿಸುವ ಹಾಗೂ ಓಲೆಕಾರನಂತೆ ಕಾರ್ಯನಿರ್ವಹಿಸುವ ಕೆಲಸ ಇವರದಾಗಿದೆ.

**ವೈವಾಹಿಕ ಸ್ಥಿತಿಗತಿ**

ಗೋಸಂಗಿಗಳಲ್ಲಿ ವಿವಾಹಿತರ ಪ್ರಮಾಣಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಅವಿವಾಹಿತರು ಕಂಡುಬರುತ್ತಾರೆ. ಅವಿವಾಹಿತ ಪುರುಷರು ೪೮೨ರಷ್ಟಿದ್ದರೆ ಮಹಿಳೆಯರು ೩೫೧ ರಷ್ಟಿದ್ದಾರೆ. ಒಟ್ಟು ಅವಿವಾಹಿತರ ಪ್ರಮಾಣ ಒಟ್ಟು ೮೩೪ರಷ್ಟಿದೆ.

**ಕೋಷ್ಟಕ: ೪.೧**

**ಗೋಸಂಗಿಗಳ ಶೇಕಡಾವಾರು ವೈವಾಹಿಕ ಸ್ಥಾನಮಾನ (೨೦೦೭)**

| ಸಂ. | ವಿವರ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೦೧ | ಅವಿವಾಹಿತರು | ೪೮೨ | ೩೫೧ | ೮೩೪ |
| ೦೨ | ವಿವಾಹಿತರು | ೩೯೬ | ೪೧೬ | ೮೧೨ |
| ೦೩ | ವಿಧವೆ ವಿಧುರರು | ೦೩ | ೧೧೨ | ೧೧೫ |

ಅವಿವಾಹಿತರಲ್ಲಿ ಮಹಿಳೆಯರಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಪುರುಷರಿದ್ದಾರೆ. ಹಾಗೇ ವಿವಾಹಿತರಲ್ಲಿ ಪುರುಷ ಪ್ರಮಾಣಕ್ಕಿಂತ ಮಹಿಳೆಯರ ಪ್ರಮಾಣ ಅಧಿಕವಾಗಿದೆ. ಸಾಮಾನ್ಯವಾಗಿ ಹೆಣ್ಣು ಮಕ್ಕಳಿಗೆ ಬೇಗ ಮದುವೆ ಮಾಡುವುದರಿಂದ ಈ ರೀತಿಯ ಏರುಪೇರುಗಳು ಉಂಟಾಗಿರಬಹುದು.

ಹಾಗೇ ವಿಧುರರ ಪ್ರಮಾಣ ಕೇವಲ ೩ರಷ್ಟಿದ್ದರೆ ವಿಧವೆಯರು ೧೧೨ ಜನ ಕಂಡುಬರುತ್ತಾರೆ. ವಿಧುರರ ಸಂಖ್ಯೆ ಅತಿಕಡಿಮೆ ಇರಲು ಕಾರಣ ಪ್ರಾಯಶಃ ವಿಧುರರಿಗೆ ಹೆಂಡತಿ ಸತ್ತ ತರುವಾಯ ಮರು ಮದುವೆ ಮಾಡಿಕೊಳ್ಳುವ ಸಮ್ಮತಿ ಈ ಸಮುದಾಯದಲ್ಲಿದೆ. ಆದರೆ ವಿಧವಾ ವಿವಾಹವನ್ನು ಗೋಸಂಗಿ ಸಮುದಾಯ ನಿರಾಕರಿಸುವುದರಿಂದ ವಿಧವೆಯರ ಸಂಖ್ಯೆ ವಿಧುರರಿಗಿಂತ ಅತೀ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತದೆ.

**ವಿವಾಹ**

**ಹೆಣ್ಣು, ತೆರ, ಮದುವೆ**

ಹಿಂದೆ ಗೋಸಂಗಿಯವರಲ್ಲಿ ಗಂಡು ಮತ್ತು ಹೆಣ್ಣು ಪರಸ್ಪರ ನೋಡುವಂತೆ ಇರಲಿಲ್ಲ. ಹೆಣ್ಣಿನ ಮತ್ತು ಗಂಡಿನ ಕಡೆಯವರು ಪರಸ್ಪರ ಒಪ್ಪಿದರೆ ಸಾಕು ಮಾತು ಕತೆ ಮುಗಿಸಿ ಮದುವೆಯನ್ನು ಮಾಡುತ್ತಿದ್ದರು. ಆಗ ಹೆಣ್ಣಿನ ಅಥಾವ ಗಂಡಿನ ವಯಸ್ಸನ್ನು ಗಣನೆಗೆ ತಗೆದುಕೊಳ್ಳದೆ ಬಾಲ್ಯವಿವಾಹ ಮಾಡುತ್ತಿದ್ದ ಪದ್ಧತಿಯೇ ಹೆಚ್ಚಾಗಿತ್ತು. ಇತ್ತೀಚೆಗೆ ಈ ಪದ್ಧತಿ ಕಡಿಮೆಯಾಗುತ್ತಿದೆ.

**ತೆರ :** ಹೆಣ್ಣಿನ ಕಡೆಯವರು ಮತ್ತು ಗಂಡಿನ ಕಡೆಯವರೂ ಕೂಡಿ ದೈವದವರ ಎದುರಿಗೆ ನಾವು ಸಂಬಂಧ ಬೆಳೆಸಲು ಒಪ್ಪಿಕೊಂಡಿದ್ದೇವೆ ಎಂದು ತಿಳಿಸುತ್ತಾರೆ. ಈ ಮಾತೆ ವೇದವಾಕ್ಯವೆಂದು ತಿಳಿದು ಮುಂದಿನ ಕಾರ್ಯಗಳನ್ನು ನೆರವೇರಿಸುತ್ತಿದ್ದರು. ಈಗಿನಂತೆ ಅಂದಿನ ಕಾಲದಲ್ಲಿ ವರದಕ್ಷಣೆಯಾಗಲೀ ವರೋಪಚಾರವಾಗಲೀ ಯಾವುದೂ ಇರಲಿಲ್ಲ, ಗಂಡಿನ ಕಡೆಯವರೇ ಹೆಣ್ಣಿನ ಕಡೆಯವರಿಗೆ ೬೦ ರೂಪಾಯಿಗಳನ್ನು ತೆರವಾಗಿ ಕೊಡುತ್ತಿದ್ದರು, ಹೆಣ್ಣಿಗೆ ಬಟ್ಟೆ, ಕಾಲುಂಗರ ಚೈನು ಮತ್ತು ಅತೀ ಮುಖ್ಯವಾಗಿ ಕಾಲಿಗೆ ಚಪ್ಪಲಿ ಕೊಟ್ಟು ಮದುವೆ ಮಾಡಿಕೊಳ್ಳುತ್ತಿದ್ದರು. ಆಗಲೂ ಸಹ ಹಿರಿಯರು ಹೆಣ್ಣು ಗಂಡಿನ ಅಭಿಪ್ರಾಯವನ್ನು ಕೇಳುತ್ತಿರಲ್ಲಿಲ್ಲ ಹಾಗೂ ಪರಸ್ಪರ ಒಬ್ಬರನ್ನೊಬ್ಬರು ನೋಡುವ ಪದ್ಧತಿಯೂ ಇರಲಿಲ್ಲ. ಮಾತುಕತೆ ಮುಗಿಸಿದ ನಂತರ ಇಂಥಹ ಮನೆಯವರ ಹೆಣ್ಣು ಇಂಥಹ ಮನೆಯರ ಗಂಡಿಗೆ ಮದುವೆ ಮಾಡಲು ಒಪ್ಪಿಗೆ ಇದೆ ಎಂದು ತಿಳಿಸಿದ ತರುವಾಯ ಗಂಡಿನ (ವರ) ಕಡೆಯಿಂದ ನಿಶ್ಚಿತಾರ್ಥ ಮಾಡಿಸಲಾಗುತಿತ್ತು,ಅಂದರೆ ಹೆಣ್ಣಿಗೆ ಬಳೆ ತೊಡಿಸಿ, ಹಣ್ಣು,ಸೀರೆ, ಉತ್ತತ್ತಿ, ಹೂವು, ಕೊಬ್ಬರಿ ಇವುಗಳನ್ನು ಮಡಿಲು ತುಂಬಿಸಿ ಹೆಣ್ಣು ತಮ್ಮದೆಂದು ದೈವದ ಮುಂದೆ ಘೋಷಿಸುತ್ತಿದ್ದರು ಹಾಗೂ ಮದುವೆ ಮಾಡುವುದು ಯಾವಾಗ ಎಂಬುದನ್ನು ಅಂದೇ ತೀರ್ಮಾನಿಸುತ್ತಿದ್ದರು.

## ಮದುವೆಯ ಕ್ರಮ

ಸಮುದಾಯದವರು ತೆಗೆದುಕೊಂಡಿರುವ ತೀರ್ಮಾನದಂತೆ ಬಳಗದವರು ಗಂಡು ಹೆಣ್ಣಿನ ಕಡೆಯುವರೆಲ್ಲರೂ ಸೇರಿ ಮದುವೆಗೆ ಬೇಕಾಗುವ ಸಾಮಗ್ರಿಗಳನ್ನು ಬಟ್ಟೆ ಬರೆಗಳನ್ನು, ಒಡವೆ ವಸ್ತುಗಳನ್ನು ಖರೀದಿಸುವ ಕಾರ್ಯವನ್ನು ಪ್ರಾರಂಭಿಸುತ್ತಿದ್ದರು. ಹೆಣ್ಣಿಗೆ ಕೊಡಬೇಕಾದ ತೆರದ ಹಣವನ್ನು, ಬಟ್ಟೆಬರೆಗಳನ್ನು ಕೊಡಲು ಹೆಣ್ಣಿನ ಕಡೆಯವರನ್ನು ಕರೆಯಿಸಿ ಅವರಿಗೆ ಕೊಟ್ಟು ಕಳುಹಿಸುತ್ತಿದ್ದರು.

ಈಗಿನಂತೆ ಆಹ್ವಾನ ಪತ್ರಿಕೆ ಮಾಡಿಸುವ ಪದ್ಧತಿ ಆಗ ಇರಲಿಲ್ಲ. ಮದುವೆ ವಿಷಯವನ್ನು "ಭಾಟ್" ಮುಖಾಂತರವಾಗಲಿ ಅಥಾವ ತಮ್ಮವರನ್ನೇ ಕಳುಹಿಸಿ ತಮ್ಮ ಬಳಗದವರಿಗೆ ವಿಷಯವನ್ನು ಮುಟ್ಟಿಸಿ ಮದುವೆಗೆ ಬರಲು ಆಮಂತ್ರಣ ಕೊಡುತ್ತಿದ್ದರು. ಈಗ ಲಗ್ನ ಪತ್ರಿಕೆಯನ್ನು ಮುದ್ರಣ ಮಾಡಿಸಿ ಮನೆ ಮನೆಗೂ ಹೋಗಿ ಕರೆಕೊಡುವ ಪದ್ಧತಿ ಇದೆ. ಮದುವೆಯನ್ನು ಸಾಮಾನ್ಯವಾಗಿ ಹೆಣ್ಣಿನ ಮನೆಯಲ್ಲಿಯೇ ಮಾಡುತ್ತಾರೆ. ಈಗಿನ ಹಾಗೆ ಛತ್ರದಲ್ಲಿ ಅಥಾವ ಕಲ್ಯಾಣ ಮಂಟಪದಲ್ಲಿ ಹಿಂದೆ ಮದುವೆ ಮಾಡುತ್ತಿರಲಿಲ್ಲ. ಮದುವೆ ಕಾರ್ಯ ಸುಮಾರು ೫ ರಿಂದ ೬ ದಿನಗಳವರಗೆ ನಡೆಸುತ್ತಿದ್ದರು. ಈ ಸಂದರ್ಭದಲ್ಲಿ ಗಂಡಿನ ಕಡೆಯಿಂದ ಮೂರು ಊಟ, ಹೆಣ್ಣಿನ ಕಡೆಯಿಂದ ಎರಡು ಊಟ ನಡೆಯುತ್ತಿತ್ತು. ಮದುವೆ ಆದ ಮೇಲೆ ಬಳಗದ ಊಟವೆಂದು ಕರಿ ಊಟ(ಮಾಂಸದ)ವನ್ನು ಕೊಡುವ ಪದ್ಧತಿ ಕಡ್ಡಾಯವಾಗಿತ್ತು.

ಮುಹೂರ್ತದ ದಿನ ಹೋಳಿಗೆ ಊಟವೇ ಆಗಬೇಕಿತ್ತು. ಊಟಕ್ಕೆ ಕುಳಿತಿರುವ ಪಂಕ್ತಿಯಲ್ಲಿ ಯಾರಾದರೊಬ್ಬ ಹಳೆಯ ವೈಷಮ್ಯವಿರುವ ವ್ಯಕ್ತಿ ಬೇಕೆಂತಲೇ ಅವಮಾನಿಸುವ ಉದ್ದೇಶದಿಂದ ಹೆಚ್ಚು ಹೆಚ್ಚು ಬಡಿಸುವಂತೆ ಪದೇ ಪದೇ ಪೀಡಿಸುತ್ತಿದ್ದನು. ಆ ಸಂದರ್ಭದಲ್ಲಿ ಅವನ ಬೇಡಿಕೆಯಂತೆ ಬಡಿಸದಿದ್ದರೆ ಬಡಿಸುವವರು ಮೊದಲು ತಟ್ಟೆಯಲ್ಲಿರುವುದು ಮುಗಿಸು ನಂತರ ಬಡಿಸುತ್ತೇವೆ ಅಂದರೆ ವಿರೋಧಿ ಗುಂಪಿನವರು ಇಲ್ಲ ಇಲ್ಲ ಈಗಲೆ ಅವನು ಕೇಳಿದಷ್ಟು ಬಡಿಸಿ ಎಂದು ಹಠ ಹಿಡಿಯುತ್ತಿದ್ದರು. ಬಡಿಸದಿದ್ದ ಪಕ್ಷದಲ್ಲಿ ಕೋಪಗೊಂಡು ಹೊಟ್ಟೆ ತುಂಬಾ ಊಟ ಬಡಿಸುವ ಯೋಗ್ಯತೆ ಇರದ ಈ ಮದುವೆ ಊಟ ಬೇಡ ಎಂದು ಬಳಗದವರಿಗೆಲ್ಲಾ ಕೇಳುವಂತೆ ಚೀರಾಡಿ ಹೊರಟು ಬಿಡುತ್ತಿದ್ದರು. ಪಂಕ್ತಿಯಲ್ಲಿ ಕುಳಿತವರು ಸಹ ಅವನು ಪುನಃ ಬಂದು ಊಟ ಮಾಡುವವರೆಗೂ ಊಟ ತ್ಯಜಿಸಿ ಕುಳಿತಿರುತ್ತಿದ್ದರು. ಸಹ ಸಂಬಂಧಿಗಳು ಜೊತೆಗೂಡಿ ಹೋಗಿ ಕೋಪಗೊಂಡ ವ್ಯಕ್ತಿಗೆ ಸಮಾದಾನ ಪಡಿಸಿ ಕರೆದುಕೊಂಡು ಬಂದು ಪುನಃ ಪಂಕ್ತಿಯಲ್ಲಿ ಕೂರಿಸಿದ ನಂತರವೇ ಸರ್ವ ಸಹಭೋಜನ ನಡೆಯುತ್ತಿತ್ತು.

**ಚಪ್ಪರ:** ಸಗಾಯಿ ಅಂದರೆ ನೆಂಟಸ್ತನ ಮಾಡುವ ಹಿಂದಿನ ಬೆಳಿಗ್ಗೆ ರಾಹುಕಾಲ ಹೊರತುಪಡಿಸಿ ೫, ೯ ಅಥವಾ ಹನ್ನೊಂದು ಕಂಬಗಳನ್ನು ತಂದು ಮನೆಯ

ಮುಂಭಾಗದಲ್ಲಿ ನಿಲ್ಲಿಸಿ ಪ್ರತಿ ಕಂಬಕ್ಕೂ ಕೆಂಪು ಮತ್ತು ಬಿಳಿ ಬಣ್ಣಗಳ ಪಟ್ಟಿಯನ್ನು ಹಚ್ಚಿ ಅರಿಶಿಣ ಕುಂಕುಮವನ್ನು ಹಚ್ಚಿ ಮಾವಿನ ಎಲೆಗಳಿಂದ ಕಟ್ಟಿ ಸಿಂಗಾರ ಮಾಡುತ್ತಾರೆ. ಮನೆಯ ಮುಂದೆ ಬಲಭಾಗದಲ್ಲಿ ಗುಂಡಿಯನ್ನು ತೋಡಿ ಆ ಗುಂಡಿಯನ್ನು ಗೋಮಯದಿಂದ ಸಾರಿಸಿ ರಂಗವಲ್ಲಿ ಹಾಕಿ ಗುಂಡಿಯೊಳಗೆ ಅಕ್ಷತೆ ಅರಿಶಿಣ ಕುಂಕುಮ ಹೂವು ಇತ್ಯಾದಿಗಳನ್ನು ಹಾಕಿ ಅದರೊಳಗೆ ಒಂದು ಕಂಬವನ್ನು ನಿಲ್ಲಿಸಿ ಭದ್ರಪಡಿಸಿ ಕಂಬಕ್ಕೆ ಕಂಕಣಕಟ್ಟಿ ಹೂವು ಮುಡಿಸಿ ಕಂಬದ ಬುಡದಲ್ಲಿ ಗೋಮಯದಿಂದ ಮಾಡಿದ ಗಣಪತಿಯನ್ನಿಟ್ಟು ಹಣ್ಣು ಕಾಯಿಗಳನ್ನಿಟ್ಟು ಮುತ್ತೈದೆಯರು ಆರತಿ ಮಾಡಿ ಪೂಜಿಸಿದ ನಂತರ ಎಲ್ಲಾ ಕಂಬಗಳನ್ನು ನೆಡುತ್ತಾರೆ. ಮನೆಯ ಮುಂಭಾಗದ ಕಂಬಗಳಿಗೆ ಹಾಲು, ಹಸಿರು, ಕಂಬಗಳನ್ನು ಕಟ್ಟುತ್ತಾರೆ. ಪದ್ಧತಿ ಪ್ರಕಾರ ಚಪ್ಪರವನ್ನು ತಯಾರಿಸಿ ಚಪ್ಪರದ ಮೇಲೆ ತೆಂಗಿನ ಗರಿಯಿಂದ ಮುಚ್ಚುತ್ತಾರೆ. ಕಂಬಗಳಿಗೆಲ್ಲ ತೆಂಗಿನ ಸುಳಿ ಗರಿಗಳನ್ನು ಅಲಂಕಾರವಾಗಿ ಸುತ್ತಿ ಮೆರಗು ಕೊಡುತ್ತಾರೆ. ಚಪ್ಪರದ ಒಳಭಾಗದಲ್ಲಿ ಬಣ್ಣ ಬಣ್ಣದ ಹೂವುಗಳಿಂದ ಬಾಳೆ ಕಂಬಗಳಿಂದ ತಳಿರು ತೋರಣಗಳಿಂದ ಅಲಂಕಾರ ಮಾಡುತ್ತಾರೆ. ಇನ್ನು ಕೆಲವರು ಬಣ್ಣದ ಕಾಗದಗಳಿಂದ ಶೃಂಗಾರಿಸುತ್ತಾರೆ. ಅಂದು ಮಧ್ಯಾಹ್ನ ಚಪ್ಪರದ ಊಟ ನಡೆಯುತ್ತದೆ.

ಅದೇ ದಿನ ರಾತ್ರಿ ದೇವರ ಕಾರ್ಯ ಅಂದರೆ ನಮ್ಮ ಭಾಷೆಯಲ್ಲಿ "ರಾತ್ರೀ ಜೋಗೋ" ಎಂದು ಕರೆಯುತ್ತೇವೆ. ಪ್ರತಿ ಮನೆಯಿಂದ ಒಬ್ಬ ಮುತ್ತೈದೆ ಹೆಣ್ಣುಮಗಳು ಸುಚೀರ್ಭೂತಳಾಗಿ ಬಂದು ದೇವರ ಕಾರ್ಯದಲ್ಲಿ ಭಾಗವಹಿಸಬೇಕು. ಎಲ್ಲಾ ಹೆಣ್ಣು ಮಕ್ಕಳು ತಮ್ಮ ಮನೆದೇವರಾದ ಸಿತಳಾ ಭವಾನಿ ಮತ್ತು ತುಳುಜಾ ಭವಾನಿಯವರ ಹೆಸರಿನಲ್ಲಿ ಕಳಸ ಕಟ್ಟಿ ಬಟ್ಟೆ ಬರೆ ಆಭರಣಗಳಿಂದ ಅಲಂಕಾರ ಮಾಡಿ ರಾತ್ರಿಪೂರ್ಣ ದೇವಿಯವರ ಹೆಸರಿನಲ್ಲಿ ಹಾಡುಗಳನ್ನು ಹೇಳುತ್ತ ಪೂಜೆಯನ್ನು ಮಾಡುತ್ತಾರೆ. ಹಾಗೂ ಉಪ್ಪು ಹಾಕದ ಅನ್ನವನ್ನು ಮಾಡಿ ಐದು ಕಂಚಿನ ತಟ್ಟೆಗಳಿಗೆ ತುಂಬಿಸುತ್ತಾರೆ. ಈ ಅನ್ನಕ್ಕೆ ತುಪ್ಪ ಮತ್ತು ಬೆಲ್ಲವನ್ನು ಹಾಕಿರುತ್ತಾರೆ. ನಮ್ಮ ಭಾಷೆಯಲ್ಲಿ ಇದಕ್ಕೆ ಫಿಕ್ಕೋ ಫಾಟೋ (ಭುಕ್ತಡ್) ಸಪ್ಪೆ ಅನ್ನ ಎಂದು ಕರೆಯುತ್ತೇವೆ. ಬೆಳಗಿನ ಜಾವಕ್ಕೆ ದೇವತೆಗಳಿಗೆ ಇದನ್ನೇ ನೈವೇದ್ಯ ಮಾಡಿ ಪೂಜೆಯನ್ನು ಪೂರ್ಣಗೊಳಿಸಿ ೫ ಜನ ಮುತ್ತೈದೆಯವರಿಗೆ ಎಡೆ ತುಂಬಿದ ಕಂಚಿನ ತಟ್ಟೆಗಳನ್ನು ಪ್ರಸಾದ ರೂಪದಲ್ಲಿ ಕೊಟ್ಟು ಕಳುಹಿಸುತ್ತಾರೆ.

ದಿಬ್ಬಣ : ಗಂಡಿನ ಕಡೆಯ ದಿಬ್ಬಣ ಬಂದಿದೆಯೆಂದು ತಿಳಿದ ಕೂಡಲೆ ಹೆಣ್ಣಿನವರು ಬಂದ ಬೀಗರಿಗೆ ಕುಡಿಯಲು ನೀರು ಬೆಲ್ಲವನ್ನು ಕಳುಹಿಸಿಕೊಡುತ್ತಾರೆ. ಬಂದಂತಹ ಬೀಗರಿಗೆ ಕೂರಲು ಚಾಪೆಗಳನ್ನು ಅಥವಾ ಜಮಖಾನಗಳನ್ನು ಹಾಸುತ್ತಾರೆ. ಸ್ವಲ್ಪ ಸಮಯದ ನಂತರ ಹೆಣ್ಣಿನ ಕಡೆಯವರೆಲ್ಲರೂ ಸೇರಿ ದೇವರ ಪೂಜೆಗೆ ಬೇಕಾಗುವ ಹಣ್ಣು ಹೂವುಗಳೊಂದಿಗೆ ಆರತಿಯನ್ನು ಹಿಡಿದು ಮಂಗಳ ವಾದ್ಯಗಳೊಂದಿಗೆ ಬೀಗರಿಗೆ ಎದುರುಗೊಳ್ಳಲು ದೇವಸ್ಥಾನಕ್ಕೆ ಹೋಗಿ ದೇವರಿಗೆ ಪೂಜೆ ಮಾಡಿಸಿ ಬಂದಿರುವ

ಬೀಗರಿಗೆ ಕುಶಲೋಪಚಾರಿಗಳೊಂದಿಗೆ ಸತ್ಕರಿಸಿ ದಿಬ್ಬಣಕ್ಕೆ ಕರೆತರುತ್ತಾರೆ. ಚಪ್ಪರದ ಹತ್ತಿರ ಗಂಡಿನವರು ಬಂದ ಕೂಡಲೇ ಹೆಣ್ಣಿನವರು ಮತ್ತು ಗಂಡಿನವರು ಎದುರು ಬದುರಾಗಿ ನಿಂತು ಒಬ್ಬರ ಮೇಲೊಬ್ಬರು ಅಕ್ಕಿಯನ್ನು ಹಾಕಿ ಬೀಗರಿಗೆ ಬರಮಾಡಿ ಕೊಳ್ಳುತ್ತಾರೆ. ತರುವಾಯ ಗಂಡಿನ ಕಡೆಯವರನ್ನು ಬಿಡದಿ ಮನೆಗೆ ಕರೆದೊಯ್ಯುತ್ತಾರೆ.

**ಸಗಾಯಿ** : ಮನೆಯ ಮುಂದೆ ಹಾಕಿರುವ ಹಂದರದಲ್ಲಿ ಜಮಖಾನವನ್ನು ಪೂರ್ವಾಭಿಮುಖವಾಗಿ ಗಂಡು ಕೂರುವಂತೆ ಜಮಖಾನವನ್ನು ಹಾಸಿ ಅದರ ಮೇಲೆ ಅಕ್ಷತೆ ಹಾಕಿ ಸಿದ್ಧಪಡಿಸುತ್ತಾರೆ. ಮದುಮಗನಿಗೆ ಹೊಸ ಬಟ್ಟೆಗಳನ್ನು ಧರಿಸಿ ತಲೆಗೆ ಪೇಟಾವನ್ನು ಸುತ್ತಿ ಹಣೆಗೆ ಅಡ್ಡವಾಗಿ ಕುಂಕುಮವನ್ನು ಹಚ್ಚಿ ಹೆಗಲ ಮೇಲೆ ಶಲ್ಯವನ್ನು ಹಾಕಿ ಕೈಯಲ್ಲಿ ನಿಂಬೆಹಣ್ಣು ಚುಚ್ಚಿದ ಚಾಕು ಅಥವಾ ಕಠಾರಿ ಕೊಡುತ್ತಾರೆ. ತರುವಾಯ ಆತನನ್ನು ಕರೆದುಕೊಂಡು ಬಂದು ಹಾಸಿರುವ ಜಮಖಾನದ ಮೇಲೆ ಪೂರ್ವಕ್ಕೆ ಮುಖಮಾಡಿ ದೈವದ ಎದುರು ಕೂರಿಸುತ್ತಾರೆ. ಸುಮಾರು ರಾತ್ರಿ ೮ ರಿಂದ ೯ ಗಂಟೆಗೆ "ಸಗಾಯಿ" (ವೀಳ್ಯಶಾಸ್ತ್ರದ ಕಾರ್ಯ) ಪ್ರಾರಂಭವಾಗುತ್ತದೆ. ಹೆಣ್ಣುಮಕ್ಕಳು ಕಳಸ ಹೂಡಿ ಆರತಿಯನ್ನು ತಯಾರಿ ಮಾಡಿ ಕಳಸಕ್ಕೂ ಗಂಡಿಗೂ ಆರತಿ ಬೆಳಗುತ್ತಾರೆ. ಗಂಡಿನ ಮತ್ತು ಹೆಣ್ಣಿನ ತಂದೆತಾಯಿಂದಿರು ತಾವು ಕೊಡಬೇಕಾದ ಒಡುವೆ ವಸ್ತ್ರ, ಸಕ್ಕರೆ, ಎಲೆ ಅಡಿಕೆ ಇವುಗಳೊಂದಿಗೆ ಬಂದು ಕೂರುತ್ತಾರೆ. ಆ ಸಂದರ್ಭದಲ್ಲಿ ಗೌಡರು ಹಿರಿಯರೂ ಬಂದು ಬಳಗದವರೂ ಸೇರಿರುತ್ತಾರೆ. ಕಳಸದ ಮುಂಭಾಗದಲ್ಲಿ ಗಂಡಿನ ಕಡೆಯಿಂದ ೧೦ ವೀಳ್ಯದೆಲೆಯಂತೆ ಜೋಡಿಸಿ ಅದರ ಮೇಲೆ ಅಡಿಕೆಯಿಟ್ಟು ಸಾಲಾಗಿ ಜೋಡಿಸುತ್ತಾರೆ. ಇದರಂತೆ ಹೆಣ್ಣಿನ ಕಡೆಯಿಂದ ಐದು ಎಲೆಯಂತೆ ಜೋಡಿಸಿಡಬೇಕು. ಇದಕ್ಕೆ "ಬೀಡಾ" ಎಂದು ಕರೆಯುತ್ತಾರೆ. ಅದರ ತರುವಾಯ ಹೆಣ್ಣು ಮತ್ತು ಗಂಡಿನವರು ತಂದಿರುವ ಒಡವೆ ವಸ್ತ್ರ ಇತ್ಯಾದಿಗಳ ತಟ್ಟೆಯನ್ನು ಬದಲಾಯಿಸಿಕೊಳ್ಳಲಾಗುತ್ತದೆ, ನಂತರ ಇವರಿಬ್ಬರಿಂದಲೂ ಬಳಗದ ಹಣವನ್ನು ಪಡೆದು ಗೌಡರಿಗೆ ಒಪ್ಪಿಸುತ್ತಾರೆ. ಮುಂದೆ ಕಂಕಣಬಲ ಬೇಗ ಕೂಡಿಬರಲಿ ಎನ್ನುವ ಉದ್ದೇಶದಿಂದ ಮದುವೆ ಆಗದಿರುವ ತರುಣನನ್ನು ಅಡಿಕೆ ಒಡೆಯಲು ಕೂರಿಸುತ್ತಾರೆ, ಅಡಿಕೆ ಒಡೆಯಲು ಕುಳಿತ ಪೇಟಧಾರಿ ತರುಣನ ಎದುರಿಗೆ ಅಗಲವಾದ ಒಂದು ಕಲ್ಲನ್ನಿಟ್ಟು ಅದರ ಮೇಲೆ ದುಂಡು ಅಡಿಕೆಯನ್ನು ಒಂದರ ಮೇಲೊಂದು ಕೂರುವಂತೆ ಜೋಡಿಸಿ ಹುಡುಗನಿಂದ ಇಂಥಹ ಮನೆಯ ಹೆಣ್ಣನ್ನು ಇಂಥಹ ಮನೆಯ ಗಂಡಿಗೆ ಕೊಟ್ಟು ಮದುವೆ ಮಾಡಲು ನಿಮ್ಮೆಲ್ಲರ ಒಪ್ಪಿಗೆ ಇದೇಯೇ ಎಂದು ಕೇಳುತ್ತಾರೆ. ಎಲ್ಲರೂ ಒಪ್ಪಿಗೆಯಿದೆ ಎಂದು ಹೇಳಿದ ಮೇಲೆ ಆ ಹುಡುಗ ಒಂದೇ ಹೊಡತಕ್ಕೆ ಅಡಿಕೆ ಪುಡಿಯಾಗುವಂತೆ ಹೊಡೆದು ಹೊಡೆದ ಕಲ್ಲನ್ನು ಅಲ್ಲಿಯೇ ಬಿಡುತ್ತಾನೆ. ಹಿರಿಯರು ಆ ಚೂರುಗಳೆಲ್ಲವನ್ನು ಆರಿಸಿ ಗಂಡಿನ ಹೆಗಲ ಮೇಲಿದ್ದ ಶಲ್ಯದ ಬಲ ಭಾಗದ ತುದಿಯಲ್ಲಿ ಕಟ್ಟುತ್ತಾರೆ. ಬೀಗರಿಬ್ಬರೂ ಗಂಡಿನವರು ಹೆಣ್ಣಿನವರು ಬಾಯಿಗೂ, ಹೆಣ್ಣಿನವರು ಗಂಡಿನವರ ಬಾಯಿಗೂ ಸಕ್ಕರೆ ಹಾಕಿಕೊಂಡು ಒಬ್ಬರನ್ನೊಬ್ಬರು

ತಬ್ಬಿಕೊಳ್ಳುತ್ತಾರೆ. ನಂತರ ಗೌಡರಿಗೆ ೧೦ ಎಲೆಯ ಬೀಡಾವನ್ನು ದೈವದವರಿಗೆ ೫ ಎಲೆಯ ಬೀಡಾವನ್ನು ಕೊಡುತ್ತಾರೆ. ಅಲ್ಲಿ ಸೇರಿರುವಂತಹ ಎಲ್ಲಾರಿಗೂ ಸಕ್ಕರೆ ಹಾಗೂ ಬೀಡಾವನ್ನು ಹಂಚುತ್ತಾರೆ.

ಪೂಜಿಸಿದ ಕಳಸಕ್ಕೆ ಒಂದು ಬೀಡ, ಗ್ರಾಮದ ದೈವಕ್ಕೆ ಒಂದು ಬೀಡ, ಸಮಾಜದ ಗೌಡರ ಮನೆತನದ ಹಿರಿಯರಿಗೆ ಒಂದೊಂದು ಬೀಡ, ಬೇರೆ ಊರುಗಳಿಂದ ಬಂದಿರುವ ಗೌಡರುಗಳಿಗೆ ಒಂದೊಂದು ಬೀಡ, ನಂತರ ರೈತರಿಗೆ, ಸಮಾಜದ ಮುಖಂಡರಿಗೆ ಒಂದೊಂದು ಬೀಡ ಹೀಗೆ ಮದುವೆಗೆ ಆಗಮಿಸಿದ ಎಲ್ಲರಿಗೂ ಬೀಡ ಮತ್ತು ಸಕ್ಕರೆ ವಿತರಿಸುತ್ತಾರೆ.

ಪ್ರಸ್ತುತ ದಿನಗಳಲ್ಲಿ ಸ್ವಲ್ಪ ಬದಲಾವಣೆಯಾಗಿದೆ. ಈ ಹಿಂದೆ ಬೀಡ ಕೊಡುವಾಗ ಯಾರಿಗಾದರೂ ಬೀಡ ಕೊಡದೆ ಹೋದಲ್ಲಿ ಆತನು ನನಗೆ ಬೀಡ ಕೊಟ್ಟಿಲ್ಲ ನಾನು ಜಾತಿ ಮಗನಲ್ಲವೆ ನನಗೆ ಕೊಡದೆ ಇರಲು ಕಾರಣವೇನು, ನಾನೇನು ತಪ್ಪು ಮಾಡಿರುವೆ ಇದನ್ನು ತೀರ್ಮಾನ ಮಾಡಿ ಎಂದು ಸಮಾಜಕ್ಕೆ ಪ್ರಶ್ನಿಸುತ್ತಿದ್ದರು. ಇದರಿಂದ ಮಂಗಳ ಕಾರ್ಯಗಳಿಗೆ ಅಡ್ಡಿಯುಂಟಾಗುತ್ತಿತ್ತು. ಅದ್ದರಿಂದ ಈಗ ಕಳಸಕ್ಕೆ ಗ್ರಾಮದೇವತೆಗೆ ಗೌಡರಿಗೆ, ಹಿರಿಯರಿಗೆ, ಬಳಗದ ಮುಖಂಡರಿಗೆ ಬೀಡಾ ಕೊಟ್ಟು ನಂತರ ಪ್ರತಿ ಗ್ರಾಮದ ದೈವದ ಹೆಸರಿನಲ್ಲಿ ಆಯಾ ಗ್ರಾಮದ ಹಿರಿಯರಿಗೆ ಕರೆಯಿಸಿ ಬೀಡ ನೀಡುತ್ತಾರೆ. ತರುವಾಯ ಆಗಮಿಸಿದ ಎಲ್ಲ ಕುಲಬಾಂಧವರಿಗೂ ಸಕ್ಕರೆ ಬೀಡಾ ನೀಡುವ ಪದ್ಧತಿ ಇದೆ.

ಗಂಡಿನವರು ಗಂಡಿನಿಂದ ಹೆಣ್ಣಿಗೆ "ಖೋಳೊ"(ಮಡಿಲು) ತುಂಬಿಸುತ್ತಾರೆ. ಇದರಲ್ಲಿ ಕೊಬ್ಬರಿ ಬಟ್ಟಲು ಎಲೆ, ಅಡಿಕೆ ಉತ್ತತ್ತಿ, ಹಣ, ಹಣ್ಣು, ಗಂಡೇ ಹೆಣ್ಣಿನ ಮಡಿಲಿಗೆ ಸುರಿಯಬೇಕು ಆಗಲೂ ಸಹ ಹೆಣ್ಣು ಗಂಡಿನ ಮುಖ ನೋಡಬಾರದೆಂದು ಮುಖಕ್ಕೆ ಮುಸುಕು ಹಾಕಿರುತ್ತಾರೆ. ಇದೇ ರೀತಿ ಹೆಣ್ಣಿನಿಂದ ಗಂಡಿಗೆ ಉಡಿ ತುಂಬಬೇಕು ಗಂಡಿನವರು ಉಡಿಯಲ್ಲಿ ಏನು ಹಾಕಿರುತ್ತಾರೋ ಅದರ ಎರಡಷ್ಟು ಹೆಣ್ಣು ಗಂಡಿಗೆ ಉಡಿ ತುಂಬಬೇಕು ಇಲ್ಲಿಗೆ ಸಗಾಯಿ ಕಾರ್ಯ ಮುಕ್ತಾಯವಾಗುತ್ತದೆ.

**ಬಳೆ ತೊಡಿಸುವ ಕಾರ್ಯ:** ಸಗಾಯಿ ಮುಗಿದ ನಂತರ ಎಲ್ಲರೂ ಹೋದ ಬಳಿಕ ಅದೇ ಸ್ಥಳದಲ್ಲಿ ಒಂದು ಜಮಖಾನವನ್ನು ಹಾಸಿ ಅಕ್ಷತೆ ಹಾಕಿ ಬಳೆಗಾರತಿಯನ್ನು ಕರೆಯಿಸಿ ಬಳೆ ಮಲ್ಹಾರವನ್ನು ಜಮಖಾನದ ಮಧ್ಯ ಭಾಗದಲ್ಲಿರಿಸಿ ಎಲ್ಲಾ ಹೆಣ್ಣು ಮಕ್ಕಳೂ ಸುತ್ತಲೂ ಕೂರುತ್ತಾರೆ. ಮುತ್ತೈದೆಯರು ಬಳೆಯ ಮಲ್ಹಾರಕ್ಕೆ ಅರಿಶಿಣ ಕುಂಕುಮ ಹೂವಿನಿಂದ ಪೂಜಿಸುತ್ತಾರೆ. ನಂತರ ವಧುವನ್ನು ಕರೆಯಿಸಿ ಆಕೆಯಿಂದ ಅಕ್ಕಿ, ಬೆಲ್ಲ, ಹಣ್ಣು, ಕಾಯಿ, ಕೊಬ್ಬರಿ, ಉತ್ತುತ್ತಿ, ಎಲೆ ಅಡಿಕೆ ಕಾಣಿಕೆಯಾಗಿ ಇವೆಲ್ಲವನ್ನು ಇರಿಸಿ ಪೂಜೆ ಮಾಡಿಸುತ್ತಾರೆ. ಮೊದಲು ವಧುವಿಗೆ ಬಳೆ ತೊಡಿಸುತ್ತಾರೆ. ನಂತರ ಎಲ್ಲಾ ಹೆಣ್ಣು ಮಕ್ಕಳಿಗೂ ಬಳೆ ತೊಡೆಸುತ್ತಾರೆ. ಈ ಸಂದರ್ಭದಲ್ಲಿ ಹಾಡುಗಳನ್ನು ಹೇಳುತ್ತಾರೆ. ಕೊನೆಗೆ ಬಳೆ ಮಲ್ಹಾರಕ್ಕೆ ಎಲ್ಲರು ನಮಸ್ಕಾರಿಸಿ ಅವರಿಗೆ ಸಂಭಾವನೆಯನ್ನು ನೀಡಿ ಕಳುಹಿಸುತ್ತಾರೆ.

**ಅರಿಶಿಣ ಹಚ್ಚುವ ಕಾರ್ಯ:** ರಾತ್ರಿ ಸಗಾಯಿ ಊಟವಾದ ನಂತರ ಮದುಮಕ್ಕಳಿಗೆ ಅರಿಶಿಣ ಹಚ್ಚುವ ಕಾರ್ಯ ನಡೆಯುತ್ತದೆ. ಮೊದಲಿಗೆ ಗಂಡಿನ ಕಡೆಯವರು ಅರಿಶಿಣ ಪುಡಿಗೆ ನೀರು ಮತ್ತು ಸ್ವಲ್ಪ ಕೊಬ್ಬರಿ ಎಣ್ಣೆಯನ್ನು ಬೆರೆಯಿಸಿ ಮಿಶ್ರಣವನ್ನು ಮಾಡುತ್ತಾರೆ. ಮದುವೆಯಾಗದಿರುವ ಮಕ್ಕಳಿಂದ ಮಧುಮಗನಿಗೆ ಕಾಲಿನಿಂದ ತಲೆಯವರೆಗೆ ಪಾದದಿಂದ ಮುಡಿಯವರೆಗೆ ಅರಿಶಿಣವನ್ನು ಹಚ್ಚಿಸುತ್ತಾರೆ. ಗಂಡಿಗೆ ಹಚ್ಚುವ ಅರಿಶಿಣದಲ್ಲಿ ಅರ್ಧಭಾಗ ಹೆಣ್ಣಿಗೆ ಹಚ್ಚಲು ಕೊಡುತ್ತಾರೆ. ಇಲ್ಲಿಯೂ ಸಹ ಮದುವೆಯಾಗದಿರುವ ಹೆಣ್ಣು ಮಕ್ಕಳಿಂದ ಮಧುಮಗಳಿಗೆ ಪಾದದಿಂದ ಮುಡಿಯವರೆಗೆ ಅರಿಶಿಣವನ್ನು ಹಚ್ಚಿಸುತ್ತಾರೆ. ರಾತ್ರಿಯಲ್ಲಿ ಗಂಡಿನ ಕಡೆಯವರು ಹೆಣ್ಣಿನ ಕಡೆಯವರಿಗೂ ಹೆಣ್ಣಿನ ಕಡೆಯವರಿಗೆ ಗಂಡಿನ ಕಡೆಯವರಿಗೆ ಅರಿಶಿಣ ಹಚ್ಚುತ್ತಾ ಗೇಲಿ ಮಾಡುತ್ತಾ ಹಾಡುಗಳನ್ನು ಹಾಡುತ್ತಾ ಸಂಭ್ರಮಿಸುತ್ತಾರೆ.

ಬೆಳಗಾದ ನಂತರ ಅರಿಶಿಣ ಇಳಿಸುವ ಕಾರ್ಯವಾಗಿದ್ದು ಇದನ್ನು ಮದುವೆ ಯಾಗಿರುವ ಗಂಡು ಹಾಗೂ ಮದುವೆಯಾಗಿರುವ ಹೆಣ್ಣು ಇವರುಗಳಿಂದ ಮದುಮಕ್ಕಳ ಅರಿಶಿಣವನ್ನು ಮುಡಿಯಿಂದ ಪಾದದವರೆಗೆ ಇಳಿಸುವ ಕಾರ್ಯ ಮಾಡುತ್ತಾರೆ. ನಂತರ ಸ್ನಾನ ಮಾಡುವವರೆಗೂ ವಧುವರನನ್ನು ಏಕಾಂಗಿಯಾಗಿ ಹೊರಗಡೆ ಎಲ್ಲಿಯೂ ಕಳುಹಿಸುವುದಿಲ್ಲ. ಒಂದು ವೇಳೆ ಹೋಗಲೇಬೇಕೆಂಬ ಸಂದರ್ಭದಲ್ಲಿ ಮೈತುಂಬಾ ಹೊದಿಸಿ ಕೈಯಲ್ಲಿ ಕಠಾರಿಯನ್ನು ಹಿಡಿಸಿ ಕಾಲಿಗೆ ಚಪ್ಪಲಿಯನ್ನು ತೊಡಿಸಿ ಜೊತೆಯಲ್ಲಿ ಒಬ್ಬರನ್ನು ಸಂಗಾತಿಯಾಗಿ ಕಳುಹಿಸಿಕೊಡುವರು

ಬೆಳಗಾದ ಮೇಲೆ ವಾದ್ಯಗಳೊಂದಿಗೆ ಮುತ್ತೈದೆಯರು ಪೂಜಾ ಸಾಮಗ್ರಿಗಳೊಂದಿಗೆ ಗಂಗೆಯ ಪೂಜೆಗೆ ಹೋಗಿ ಗಂಗೆಯನ್ನು ಪೂಜೆ ಮಾಡಿ ೫ ಬಿಂದಿಗೆಗಳಲ್ಲಿ ನೀರನ್ನು ತುಂಬಿ ಕೊಂಡು ಮದುವೆ ಚಪ್ಪರಕ್ಕೆ ತಂದು ೪ ಬಿಂದಿಗೆಗಳನ್ನು ಚೌಕಾಕಾರವಾಗಿ ೪ ಮೂಲೆಗಳಲ್ಲಿಟ್ಟು ಮಧ್ಯದಲ್ಲಿ ಒಂದು ಬಿಂದಿಯನ್ನಿರಿಸಿ ಐದು ಸಲ ಸುರಗಿ ಸುತ್ತುತ್ತಾರೆ. ಈ ಸುರಗಿಯ ಮಧ್ಯದಲ್ಲಿ ಮಣೆಯನ್ನು ಹಾಕಿ ವರನನ್ನು ಕೂರಿಸಿ ಸ್ನಾನವನ್ನು ಮಾಡಿಸುತ್ತಾರೆ. ಇದೇ ರೀತಿ ವಧುವನ್ನು ಕೂರಿಸಿ ಸ್ನಾನ ಮಾಡಿಸುತ್ತಾರೆ. ನಂತರ ಈವರಿಗೆ ಹೊಸ ಬಟ್ಟೆಗಳನ್ನು ತೊಡಿಸಿ ಆಭರಣಗಳನ್ನು ಧರಿಸಿ ಅಲಂಕಾರ ಮಾಡಿಸುತ್ತಾರೆ. ಗಂಡಿಗೆ ಮಾತ್ರ ಬಿಳಿ ಕಚ್ಚೆಪಂಚೆ ಬಿಳಿ ಅಂಗಿ ಧರಿಸಿರುತ್ತಾರೆ. ಮಂಗಳ ವಾದ್ಯಗಳಿಂದ ವರನನ್ನು ದೇವಸ್ಥಾನಕ್ಕೆ ಕರೆದುಕೊಂಡು ಹೋಗುತ್ತಾರೆ. ಮುಂಚಿತ ವಾಗಿಯೇ ಭಾಸಿಂಗವನ್ನು ದೇವಸ್ಥಾನದಲ್ಲಿಟ್ಟು ಬಂದಿರುತ್ತಾರೆ. ದೇವಸ್ಥಾನಕ್ಕೆ ಬಂದ ವರನನ್ನು ಕೂರಿಸುತ್ತಾರೆ. ಅರ್ಚಕರು ದೇವರನ್ನು ಮತ್ತು ಭಾಸಿಂಗವನ್ನು ಪೂಜಿಸಿ ಬಾಸಿಂಗವನ್ನು ಹಿರಿಯರ ಕೈಯಲ್ಲಿ ಕೊಡುತ್ತಾರೆ. ಬಾಸಿಂಗದ ವಿನ್ಯಾಸ ಬಹಳ ದೊಡ್ಡದಾಗಿದ್ದು ತಲೆತುಂಬ ಕೂರುವಂತಿರುತ್ತದೆ. ಹಿರಿಯರಾದವರು ವರನ ತಲೆಗೆ ಪೇಟ ಕಟ್ಟಿ ಹಣೆಗೆ ವೀಳ್ಯೆದೆಲೆ ಮಡಚಿಟ್ಟು ಬಾಸಿಂಗವನ್ನು ಕಟ್ಟುತ್ತಾರೆ. ವಧುವಿನ ಬಾಸಿಂಗವನ್ನು ಬುಟ್ಟಿಯಲ್ಲಿಟ್ಟುಕೊಂಡು ಚಪ್ಪರದ ಹತ್ತಿರಕ್ಕೆ ಬರುತ್ತಾರೆ. ಹಿರಿಯರಲ್ಲಿ

ಅನುಭವವಿರುವಂಥವರೇ ಧಾರೆಯ ಕಾರ್ಯವನ್ನು ಆಗಿನ ಪದ್ಧತಿಗನುಗುಣವಾಗಿ ಮಾಡುಸುತ್ತಿದ್ದರು.

ಚಪ್ಪರಕ್ಕೆ ಬಂದಿರುವ ವರನನ್ನು ವಧುವಿನ ಕಡೆಯವರು ಬಂದು ಕರೆದುಕೊಂಡು ಹೋಗಿ ಧಾರೆ ಎರೆಯುವ ಸ್ಥಳದಲ್ಲಿ ಮಣೆಯ ಮೇಲೆ ಕೂರಿಸಿ ತಟ್ಟೆಯಲ್ಲಿ ವರನ ಕಾಲುಗಳನ್ನಿರಿಸಿ ಮಾವನಿಂದ ಕಾಲು ತೊಳಿಸುತ್ತಾರೆ. ಉಡುಗೆ ತೊಡುಗೆಗಳಿಂದ ಅಲಂಕೃತವಾಗಿರುವ ವಧುವನ್ನು ಮದುವೆಯ ಮಂಟಪಕ್ಕೆ ಕರೆ ತರುತ್ತಾರೆ. ಆಗಲೂ ಸಹ ಮೇಲು ಹೊದಿಕೆಯ ಸೀರೆಯಿಂದ ಮುಖವನ್ನು ಮುಚ್ಚಿರುತ್ತಾರೆ. ವಧು ಹತ್ತಿರ ಬಂದಾಗ ವರನನ್ನು ನಿಲ್ಲಿಸಿ ಆತನ ಮುಖಕ್ಕೆ ಅಡ್ಡಲಾಗಿ ತೆರೆ ಪಂಚೆಯನ್ನು ಹಿಡಿದಿರುತ್ತಾರೆ. ತೆರೆ ಪಂಚೆ ತೆಗೆದ ಮೇಲೆ ವಧುವನ್ನು ವರನ ಎಡಭಾಗಕ್ಕೆ ಕೂರಿಸುತ್ತಾರೆ. ಮುತ್ತೈದೆಯರು ವಧುವರರಿಗೆ ಅಕ್ಷತೆಯನ್ನಿಟ್ಟು ಆರತಿಯನ್ನು ಬೆಳಗುತ್ತಾರೆ. ನಂತರ ಮುಖಾಮುಖಿಯಾಗಿ ಕೂರಿಸಿ ವರನ ಕೈಗಳಲ್ಲಿ ವಧುವಿನ ಕೈಗಳನ್ನಿರಿಸಿ ಅದರಲ್ಲಿ ಒಂದು ತೆಂಗಿನಕಾಯಿಯನ್ನು ಇರಿಸಿ ತಂದೆ ತಾಯಿಗಳಿಂದ ಹಾಗೂ ಕುಲಭಾಂದವ ರಿಂದ ಹಾಲನ್ನು ಎರೆದು ಧಾರೆ ಎರೆಸುತ್ತಾರೆ. ಧಾರೆ ಎರೆದ ನಂತರ ವಧುವರರ ಕಡೆಯಿಂದ ಪರಸ್ಪರ ಹೂವಿನ ಮಾಲೆಯನ್ನು ಹಾಕಿಸುತ್ತಾರೆ. ನಂತರ ಒಂದು ತಟ್ಟೆಯಲ್ಲಿ ಸ್ವಲ್ಪ ಅಕ್ಕಿಯನ್ನು ಹಾಕಿ ತೆಂಗಿನ ಕಾಯಿ ಹಾಗೂ ಎಲೆಅಡಿಕೆಯನ್ನಿಟ್ಟು ತೆಂಗಿನ ಕಾಯಿಯ ಮೇಲೆ ಮಾಂಗಲ್ಯವನ್ನಿರಿಸಿ ಸಮಾಜದ ಹಿರಿಯರು ಹಾಗೂ ಕುಲಬಾಂಧವರು ಮುತ್ತೈದೆಯರು ಅದನ್ನು ಮುಟ್ಟಿ ಆರ್ಶಿವಾದ ಮಾಡಲು ಎಲ್ಲರೂ ಮುಂದೆ ಅದನ್ನು ಕಳುಹಿಸಿ ಕೊಡುತ್ತಾರೆ.

ಮದುವೆ ಮಾಡಿಸುವ ಹಿರಿಯನು ಕಟ್ಟಿ ಕೊಟ್ಟಿರುವ ಲಗ್ನ ಗಂಟುಗಳನ್ನು ತರಸಿ ಅದರಲ್ಲಿರುವ ಜೀರಿಗೆ ಬೆಲ್ಲವನ್ನು ತೆಗೆದುಕೊಂಡು ಹೆಣ್ಣಿನ ಸೀರೆ ಸೆರಗಿಗು ಗಂಡಿನ ಶಲ್ಯಕ್ಕೆ ಕಟ್ಟಿರುವ ಅಡಿಕೆಯ ಸೆರಗಿಗೂ ಸೇರಿಸಿ ಜೀರಿಗೆ ಬೆಲ್ಲವನ್ನು ಇಟ್ಟು ಬ್ರಹ್ಮ ಗಂಟನ್ನು ಹಾಕುತ್ತಾನೆ. ತರುವಾಯ ಮುಹೂರ್ತದ ವೇಳೆಗೆ ಸರಿಯಾಗಿ ಬಂಧು ಭಾಂದವರ ಹಾಗೂ ಕುಲದೈವದ ಸಮ್ಮುಖದಲ್ಲಿ ತಾಳಿಯನ್ನು ಕಟ್ಟಿಸುತ್ತಾನೆ. ನಂತರ ಈರ್ವರನ್ನು ಹೊರಗಡೆ ಕರೆದುಕೊಂಡು ಹೋಗಿ ಸೂರ್ಯದೇವನ ಪೂಜೆಯನ್ನು ಮಾಡಿಸುತ್ತಾನೆ.

ಗಂಡನ ಮನೆಗೆ ಬರುವ ವಧುವರರನ್ನು ನೇರವಾಗಿ ದೇವಸ್ಥಾನಕ್ಕೆ ಕರೆದುಕೊಂಡು ಹೋಗಿ ದೇವರ ಪೂಜೆಯನ್ನು ಮಾಡಿಸಿ ನಂತರ ಗಂಡನ ಮನೆಗೆ ಕರೆದೊಯ್ಯುತ್ತಾರೆ. ಮನೆಗೆ ಬರುವಂಥ ಸೊಸೆಯನ್ನು ಒಳಗೆ ಪ್ರವೇಶಿಸುವ ಮುಂಚೆ ಹೊಸ್ತಿಲಿನ ಹೊರಭಾಗದಲ್ಲಿ ಸೊಸೆಯಿಂದ ಹೊಸ್ತಿಲ ಪೂಜೆಯನ್ನು ಮಾಡಿಸಿ ತರುವಾಯ ಹೊಸ್ತಿಲ ಮೇಲೆ ಸೊಸೆಯ ಬಲಗಾಲನ್ನು ಇರಿಸಿ ಹೆಬ್ಬೆರಳ ಹಾಗೂ ಕಾಲುಂಗರದ ಬೆರಳಿನ ನಡುವೆ ಮೊಳೆಯನ್ನಿಟ್ಟು ಹೊಡೆಯುತ್ತಾರೆ. ನಂತರ ಅಕ್ಕಿ ತುಂಬಿದ ಸೇರನ್ನು ಹೊಸ್ತಿಲ ಮೇಲಿರಿಸಿ ಅದರ ಮೇಲೆ ಬೆಲ್ಲಚ್ಚನ್ನು ಇಟ್ಟು ಸೊಸೆಯ ಬಲಗಾಲಿನಿಂದ ಸೇರನ್ನು

ಒದ್ದು ಒಳಗೆ ಬರುವಂತೆ ತಿಳಿಸುತ್ತಾರೆ. ಒಳಗೆ ಬಂದನಂತರ ಅವರನ್ನು ಅಲ್ಲಿಯೇ ನಿಲ್ಲಿಸಿ ಓಕಳಿಯನ್ನು ಮಾಡಿ ದೃಷ್ಟಿಯನ್ನು ತೆಗೆಯುತ್ತಾರೆ. ಅದಾದಮೇಲೆ ವಧುವರರು ನೇರವಾಗಿ ದೇವರ ಕೋಣೆಗೆ ಹೋಗಿ ದೀಪವನ್ನು ಬೆಳಗಿಸಿ ನಮಸ್ಕರಿಸುತ್ತಾರೆ.

ಗಂಗೆ ಪೂಜೆ ಮಾರನೆಯ ದಿನ ಬೆಳಿಗ್ಗೆ ಸ್ನಾನವನ್ನು ಮುಗಿಸಿ ದೇವರ ಪೂಜೆಯನ್ನು ಮಾಡಿಸಿ ನಂತರ ಮದುವಿಗೆ ವಸ್ತ್ರಾಭರಣಗಳನ್ನು ತೊಡಿಸಿ ಹೂವನ್ನು ಮುಡಿಸಿ ಅಲಂಕರಗೊಂಡು, ಗಂಗೆ ಪೂಜೆಗೆ ಮಂಗಳದ್ರವ್ಯವನ್ನು ತೆಗೆದುಕೊಂಡು ತಾಮ್ರದ ಬಿಂದಿಗೆಯನ್ನು ಮದುಮಗಳು ಸೊಂಟದಲ್ಲಿರಿಸಿಕೊಂಡು ಮುತ್ತೈದೆಯರೊಂದಿಗೆ ಸೇರಿಕೊಂಡು ಊರಿನ ಪ್ರಮುಖವಾದ ನದಿ, ಹಳ್ಳ, ಬಾವಿಗಳು ಇರುವ ಕಡೆ ಹೋಗಿ ಗಂಗೆಪೂಜೆಯನ್ನು ಮಾಡಲು ಕರೆದುಕೊಂಡು ಹೋಗುತ್ತಾರೆ.

ಮುತ್ತೈದೆಯರು ಬಿಂದಿಗೆಯ ತುಂಬಾ ಗಂಗೆಯನ್ನು ತುಂಬಿ ದಡದ ಮೇಲೆ ನೀರು ತುಂಬಿದ ಬಿಂದಿಗೆಯನ್ನು ಇಟ್ಟು ಕಂಕಣವನ್ನು ಕಟ್ಟಿ ನೆನೆಸಿದ ಕಾಳುಗಳನ್ನಿಟ್ಟು, ಹೂವು, ಅರಿಶಿಣ, ಕುಂಕುಮವನ್ನು ಹಚ್ಚಿ, ನಂತರ ವಧುವಿಗೆ ಉಡಿಯನ್ನು ತುಂಬಿ ಅವಳ ಮುಖಾಂತರ ಆರತಿಯನ್ನು ಬೆಳಗಿಸುತ್ತಾರೆ. ಪೂಜಿಸಿದ ನಂತರ ತಲೆಯ ಮೇಲೆ ಬಿಂದಿಗೆಯನ್ನು ಇರಿಸಿ ಮನೆಗೆ ಗಂಗೆಯನ್ನು ಕರೆತರುತ್ತಾರೆ. ಒಳಗೆ ಹೋಗುವ ಮೊದಲು ವರನು ಬಾಗಿಲ ಬಳಿಬಂದು ವಧುವಿನ ತಲೆಯ ಮೇಲಿರುವ ಬಿಂದಿಗೆಯನ್ನು ಇಳಿಸಿ ದೇವರ ಮನೆಗೆ ತೆಗೆದುಕೊಂಡು ಹೋಗಿ ಇರಿಸುತ್ತಾನೆ.

**ಮಧುಮಕ್ಕಳ ಆಟ**

ಗಂಗೆಯ ಪೂಜೆಯ ನಂತರ ಅಂದು ಸಂಜೆ ಮನೆಯ ಮುಂದೆ ಹಾಕಿರುವ ಚಪ್ಪರದ ಕೆಳಗೆ ಚಾಪೆಯನ್ನು ಹಾಸಿ ಮದುಮಕ್ಕಳನ್ನು ಮುಖಾಮುಖಿಯಾಗಿ ಕೂರಿಸಿ ಕುಲಭಾಂದವರೊಂದಿಗೆ ವಿವಿಧ ಆಟಗಳನ್ನು ನವ ದಂಪತಿಗಳಿಂದ ಆಡಿಸುತ್ತಾರೆ. ಅವುಗಳಲ್ಲಿ

**೧. ಗಂಟು ಬಿಚ್ಚುವ ಆಟ:** ಈ ಆಟದಲ್ಲಿ ಕೈಗಳಿಗೆ ಕಟ್ಟಿರುವ ಕಂಕಣದ ಗಂಟನ್ನು ಬಿಚ್ಚುವುದಾಗಿರುತ್ತದೆ. ಇದರಲ್ಲಿ ವರನು ಎಡಗೈಯಿಂದ ವಧುವಿನ ಕಂಕಣದ ಗಂಟನ್ನು ಬಿಚ್ಚಬೇಕಾಗುತ್ತದೆ. ವಧುವು ಬಲಗೈಯಿಂದ ವರನ ಕಂಕಣದ ಗಂಟನ್ನು ಬಿಚ್ಚಬೇಕು ಇದರಲ್ಲಿ ಯಾರು ಮೊದಲಿಗೆ ಬಿಚ್ಚುವರೊ ಅವರೆ ಗೆದ್ದಂತೆ.

**೨. ಉಂಗುರದ ಆಟ:** ಒಂದು ಪಾತ್ರೆಯಲ್ಲಿ ಹಾಲು ಅಥವಾ ನೀರನ್ನು ಹಾಕಿ ಅದರಲ್ಲಿ ಉಂಗುರವನ್ನು ಬಿಟ್ಟು ವಧುವರರು ಒಟ್ಟಿಗೆ ಕೈಯನ್ನು ಹಾಕಿ ಯಾರು ಮೊದಲಿಗೆ ಉಂಗುರವನ್ನು ವಶಪಡಿಸಿಕೊಳ್ಳುತ್ತಾರೊ ಅವರು ಜಯಶಾಲಿಯಾಗುತ್ತಾರೆ. ಹೀಗೆಯೇ ಅಕ್ಕಿಯಲ್ಲೂ ಆಟವನ್ನು ಆಡಿಸುತ್ತಾರೆ.

ಗಂಡು ಹೆಣ್ಣಿಗೆ ಕಟ್ಟಿರುವ ಬಾಸಿಂಗಗಳಲ್ಲಿ ಪರಸ್ಪರ ಸುಮಾರು ಐದಾರು ಕಡೆ ಹತ್ತಿಯ ಉಂಡೆಗಳನ್ನು ಮುಚ್ಚಿರುತ್ತಾರೆ. ಮುಚ್ಚಿಟ್ಟಿರುವ ಹತ್ತಿಯ ಉಂಡೆಗಳನ್ನು ಪರಸ್ಪರವಾಗಿ ಈರ್ವರು ತೆಗೆಯಬೇಕು ಹೀಗೆ ಹತ್ತಿಯ ಉಂಡೆಯನ್ನು ಒಂದು ಬಿಡದೆ ಯಾರು ಮೊದಲಿಗೆ ತೆಗೆಯುತ್ತಾರೊ ಅವರು ಗೆದ್ದಂತೆ.

೩. ಮಕ್ಕಳಾಟ: ಈ ಆಟದಲ್ಲಿ ವಧುವರರು ತಂದೆ ತಾಯಿಯ ಪಾತ್ರವನ್ನು ಧರಿಸ ಬೇಕಾಗುತ್ತದೆ. ತಾಯಿಯಾದವಳು ಹಾಲುಣಿಸಿ ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ ಅಡಿಗೆ ಕೋಣೆಗೆ ಹೋಗಿರುತ್ತಾಳೆ. ಸ್ವಲ್ಪ ಹೊತ್ತಿಗೆ ಮಗು ಅಳಲು ಪ್ರಾರಂಭಿಸುತ್ತದೆ. ತಾಯಿ ಓಡಿ ಬಂದು ಮಗುವನ್ನು ಎತ್ತಿಕೊಂಡು ಮುದ್ದಿಸಿ ಗಂಡನನ್ನು ರೀ ಬನ್ರಿ ಎಂದು ಕರೆದು ಮಗುವನ್ನು ಗಂಡನ ಕೈಗೆ ಕೊಟ್ಟು ಒಲೆ ಮೇಲೆ ಅನ್ನಕ್ಕಿಟ್ಟಿದ್ದೀನಿ ಸ್ವಲ್ಪ ಹೊತ್ತು ಆಡಿಸಿ ಎಂದು ಕೊಟ್ಟು ಒಳಗೆ ಹೋಗುತ್ತಾಳೆ. ಮಗುವನ್ನು ಎತ್ತಿಕೊಂಡು ಅಪ್ಪ ಮಗುವನ್ನು ಸುಮ್ಮನಿರಿಸಲು ಪ್ರಯತ್ನ ಮಾಡುತ್ತಾನೆ. ಆದರೆ ಮಗು ಅಳು ನಿಲ್ಲಿಸುವುದಿಲ್ಲ. ಆಗ ಗಂಡ ಹೆಂಡತಿಗೆ ಕೂಗಿ ಲೇ ಬಾರೆ ನನಗೆ ವ್ಯಾಪಾರಕ್ಕೆ ಹೋಗಲು ಹೊತ್ತಾಯ್ತು ಮಗುವನ್ನು ತಗೋ ಬಾ ಎಂದು ಕರೆಯುತ್ತಾನೆ. ತಾಯಿ ಮಗುವನ್ನು ಎತ್ತಿಕೊಂಡ ಕೆಲವೇ ಕ್ಷಣಗಳಲ್ಲಿ ರೀ... ರೀ... ಸಾರಿಗೆ ಒಗ್ಗರಣೆ ಹಾಕಬೇಕು. ತಗೋಳ್ಳಿ ಮಗೂನ ಅಂತ ಪುನಃ ಕೊಡುತ್ತಾಳೆ. ಮಗುವನ್ನು ಎತ್ತಿಕೊಂಡು ತಂದೆ ಕೆಲವೇ ಕ್ಷಣಗಳಲ್ಲಿ ಲೇ ಓಡಿ ಬಾ ಇಲ್ಲಿ ಮಗು ಉಚ್ಚೇ ಮಾಡಿದೆ ಎಂದು ಒಂದೇ ಸಮನೆ ಕರೆಯುತ್ತಾನೆ. ಹೀಗೆ ತಂದೆ ತಾಯಿ ಮಕ್ಕಳ ಲಾಲನೆ ಪಾಲನೆಯಲ್ಲಿ ಪಡುವ ತಾಪತ್ರಯಗಳನ್ನು ನಾಟಕೀಯವಾಗಿ ಪ್ರದರ್ಶಿಸುವ ಆಟವಾಗಿರುತ್ತದೆ.

ಹೀಗೇ ನೂತನ ದಂಪತಿಗಳನ್ನು ಹತ್ತಿರಗೂಡಿಸುವ ಮತ್ತು ಪರಸ್ಪರ ಹೊಂದಾಣಿಕೆ ಹಾಗೂ ಅರ್ಥೈಸಿಕೊಳ್ಳುವಿಕೆಯೇ ಮುಖ್ಯ ಉದ್ದೇಶವಾಗಿರುತ್ತದೆ. ಈ ಆಟದಲ್ಲಿ ಎಲ್ಲರೂ ನಕ್ಕು ನಲಿಯುತ್ತಾ, ಗೇಲಿ, ತಮಾಷೆ ಪಾಲ್ಗೊಂಡು ಸಂತೋಷದಿಂದ ಸಂಭ್ರಮಿಸುತ್ತಾರೆ.

ಬೀಗರೂಟ ಮೂರನೆಯ ದಿನಕ್ಕೆ ಬೀಗರೂಟದ ಕಾರ್ಯಕ್ರಮ ಈ ಊಟಕ್ಕೆ ತಮ್ಮ ಬೀಗರನ್ನು ಬಳಗದವರನ್ನು ಹಾಗೂ ಸ್ನೇಹಿತರನ್ನು ಕರೆಯುತ್ತಿದ್ದರು. ಆ ದಿನ ಒಳ್ಳೆಯ ಕುರಿಯನ್ನು ತರಿಸಿ ಹೆಂಡ ಸರಾಯಿಯನ್ನು ತರಿಸಿ ರುಚಿಯಾದ ಅಡಿಗೆಯನ್ನು ಮಾಡಿಸಿ ಬಂದಿರುವಂತಹ ಎಲ್ಲರಿಗೂ ಕುಡಿಸಿ ಊಟ ಮಾಡಿಸುತ್ತಿದ್ದರು. ನಾಲ್ಕನೆಯ ದಿನ ಅಥವಾ ಐದನೇ ದಿನ ಸೊಸೆಯನ್ನು ತವರು ಮನೆಗೆ ಕಳುಹಿಸಿಕೊಡುತ್ತಿದ್ದರು.

ಪ್ರಸ್ತ: ಮದುವೆ ಆದ ೧೬ ದಿನಕ್ಕಾಗಲೀ ಅಥವಾ ಗೌರಿ ಹಬ್ಬಕ್ಕಾಗಲಿ ಈ ಕಾರ್ಯ ವನ್ನಿಟ್ಟುಕೊಳ್ಳುತ್ತಾರೆ. ಈ ಕಾರ್ಯವನ್ನು ಹೆಣ್ಣಿನ ಮನೆಯಲ್ಲಿ ಮಾಡಿ ಕೊಡುತ್ತಾರೆ. ಪ್ರಸ್ತದ ದಿನ ವರನನ್ನು ವಧುವಿನ ಮನೆಗೆ ಕರೆ ತರಲಾಗುತ್ತದೆ, ಆ ದಿನ ರಾತ್ರಿ ದೈವಕ್ಕೆ ಊಟ ಮಾಡಿಸಿ ಪ್ರಸ್ತದ ಕಾರ್ಯ ಮಾಡಲಾಗುತ್ತಿತ್ತು.

ಇತ್ತೀಚಿನ ದಿನಗಳಲ್ಲಿ ಮುಹೂರ್ತದ ಕಾರ್ಯವನ್ನು ಪುರೋಹಿತರಿಂದ ಮಾಡಿಸುವುದೂ ಉಂಟು. ಧಾರೆ ಆದ ನಂತರ ಮದುವೆ ಊಟ ಮುಗಿಸಿ ಅಂದು ಸಂಜೆ ಹೆಣ್ಣನ್ನು ಗಂಡನ ಮನೆಗೆ ಕರೆತರುತ್ತಾರೆ. ಮದುವೆಯ ಊಟಕ್ಕೆ ಹೋಳಿಗೆ ಆಗಲೇಬೇಕು, ಊಟಕ್ಕೆ ಕುಳಿತಾಗ ಕೇಳಿದಷ್ಟು ತುಪ್ಪ ಸುರಿಯಲೇ ಬೇಕು. ಇದರಲ್ಲಿ ಏನಾದರೂ ವ್ಯತ್ಯಾಸವಾದರೆ ಅವರು ಮುನಿಸಿಕೊಂಡು ಊಟ ಬಿಟ್ಟು ಹೊರಟೇ ಹೋಗುತ್ತಿದ್ದರು. ಪುನಃ ಅವರನ್ನು ಕರೆದು ತಂದು ಊಟಕ್ಕೆ ಕೂರಿಸಿವವರೆಗೂ ಯಾರೂ ಊಟ ಮಾಡುತ್ತಿರಲಿಲ್ಲ, ಈ ರೀತಿಯಲ್ಲಿ ಮದುವೆ ಕಾರ್ಯ ಮಾಡಲಾಗುತ್ತದೆ.

# ೫

# ಆರಾಧನೆ ಆಚರಣೆ ನಂಬಿಕೆ

**ಜನನ, ನಾಮಕರಣ, ಋತುಮತಿ, ಸೀಮಂತ, ಮರಣ**

ಜನನ : ಗೋಸಂಗಿಗಳು ಮೊದಲೇ ಅಲೆಮಾರಿ ಸಮುದಾಯವಾಗಿರುವುದರಿಂದ ಪದೇ ಪದೇ ತಮ್ಮ ನೆಲೆಗಳನ್ನು ಬದಲಾಯಿಸುತ್ತಿದ್ದರು. ಇಂಥಹ ಸಂದರ್ಭದಲ್ಲಿ ಇವರ ಗುಂಪಿನಲ್ಲಿ ಯಾವ ಹೆಣ್ಣೆ ಆಗಿರಲಿ ಆಕೆ ಗರ್ಭವತಿಯಾಗಿರುವಳೆಂದು ಗೊತ್ತಾದರೆ ಆ ಹೆಣ್ಣಿಗೆ ಹೆಚ್ಚಾಗಿ ಕಠಿಣವಾದ ಕೆಲಸ ಮಾಡಲು ಬಿಡುತ್ತಿರಲಿಲ್ಲ. ಹೆರಿಗೆ ಆಗುವ ಮೊದಲೇ ಅಂದರೆ ಒಂದು ತಿಂಗಳ ಮುಂಚಿತವಾಗಿಯೇ ಹೆರಿಗೆ ಎಲ್ಲಿ ಮಾಡಿಸುವುದು ಎಂದು ಸ್ಥಳ ನಿರ್ಧರಿಸುತಿದ್ದರು. ಏಕೆಂದರೆ ವಾತಾವರಣ, ಹವಮಾನ, ಪರಿಸರ, ಸೂಲಗಿತ್ತಿಯರು ದೊರೆಯುವ ಸ್ಥಳಗಳು ಇವೆಲ್ಲವನ್ನು ಗಮನದಲ್ಲಿಟ್ಟುಕೊಂಡು ಹೆರಿಗೆಯ ಸ್ಥಳವನ್ನು ನಿರ್ಧರಿಸಲಾಗುತ್ತದೆ.

ಆಗಿನ ವಾತಾವರಣದಲ್ಲಿ 'ಸೀಮಂತ' ಮಾಡುವಂಥಹ ಆಚರಣೆಗಳು ಯಾವುವು ಇದ್ದಿರಲಿಲ್ಲ. ಸೀಮಂತವೆಂದರೇನು ಅನ್ನುವುದೇ ಅವರಿಗೆ ಗೊತ್ತಿರಲಿಲ್ಲ. ಆದರೆ ಇತ್ತೀಚೆಗೆ ಅನುಕೂಲ ಇರುವವರೂ, ಒಂದೇ ಕಡೆ ನೆಲೆ ನಿಂತವರಲ್ಲಿ ಸೀಮಂತಕಾರ್ಯ ಮಾಡುವುದು ಕಂಡುಬರುತ್ತಿದೆ.

ಹೆರಿಗೆ ನೋವು ಬಂದಾಗ ಜೀರಿಗೆ ಕಸಾಯಿ ಮಾಡಿ ಕುಡಿಸಲಾಗುತ್ತದೆ ಹಾಗು ಸೊಂಟ ಮತ್ತು ಹೊಟ್ಟೆಗೆ ಹರಳೆಣ್ಣೆ ಹಚ್ಚಿ ಬಿಸಿನೀರು ಹಾಕಲಾಗುತ್ತದೆ. ಹೆರಿಗೆ ಸುಲಭವಾಗಿ ಆಗಲು ಜನನೇಂದ್ರಿಯ ದ್ವಾರಕ್ಕೆ ಎಣ್ಣೆಯನ್ನು ಹಚ್ಚುವುದುಂಟು. ಜನನ ವಾಗುವ ಹಂತದಲ್ಲಿ ತಾಯಿಯರು (ಸೂಲಗಿತ್ತಿ) ಅವರವರ ಅನುಭವದಂತೆ ಹೆರಿಗೆ ಮಾಡಿಸುವರು. ಈ ಸಮಯದಲ್ಲಿ ತಮ್ಮ ಬಳಿ ಕುಡುಗೋಲು, ಎಣ್ಣೆ, ದಾರ, ದೀಪ, ಸೂಜಿ, ಇವುಗಳನ್ನು ಇಟ್ಟು ಕೊಳ್ಳುತ್ತಿದ್ದರು. ಹೆರಿಗೆ ಆದ ನಂತರ ಹೊಕ್ಕಳ ಬಳ್ಳಿಯನ್ನು ಕೊಯ್ದು ದಾರದಿಂದ ಕಟ್ಟುವರು,ಮುಂದೆ ಮಗುವಿಗೆ ಯಾವುದೇ ಕಾಯಿಲೆ ಬಾರದಿರಲಿ ಎನ್ನುವ ಉದ್ದೇಶದಿಂದ ಸೂಜಿಯನ್ನು ದೀಪದಿಂದ ಕಾಯಿಸಿ ಹೊಕ್ಕಳದ ಮೇಲೆ ಹಾಗೂ ಪಕ್ಕೆಯ ಎರಡು ಭಾಗದಲ್ಲೂ ಚುಟಿಕೆ ಹಾಕುತ್ತಾರೆ.

ಹೆರಿಗೆ ಆದ ತರುವಾಯ ಬೇಗ ಮಾಸ ಬೀಳದಿದ್ದಲ್ಲಿ ಬಾಣಂತಿಯ ಬಾಯಲ್ಲಿ ಅವಳ ತಲೆಯ ಕೂದಲನ್ನು ತುರುಕಿ ಅವಳು ವಾಂತಿ ಮಾಡಿಸುತ್ತಿದ್ದರು, ಆರೀತಿ

ಮಾಡಿದರೆ ಅವಳ ಗರ್ಭಕೋಶದಲ್ಲಿದ್ದ ಮಾಸ(ಕಸ) ಹೊರಗೆ ಬರುವದೆಂಬ ನಂಬಿಕೆ ಅವರದು. ಹೊರ ಬಂದ ಕಸವನ್ನು ಒಂದು ಮಡಕೆಗೆ ಹಾಕಿ ಅದರ ಬಾಯಿಗೆ ಬಟ್ಟೆಕಟ್ಟಿ ಮನೆಯ ಹೊರಭಾಗದಲ್ಲಿರುವ ನೆಲದಲ್ಲಿ ಹೂಳುತ್ತಾರೆ, ಗಂಡು ಮಗು ಹುಟ್ಟಿದ್ದರೆ ಗಂಗಾಳ ಬಾರಿಸುವರು. ಈ ಜನನದ ಸೂತಕ ಐದು ದಿನಗಳ ವರಗೆ ಇರುತದೆ.

ಛಟ್ಟಿಪೂಜೆ ಮತ್ತು ನಾಮಕರಣ: ಐದನೇ ದಿನಕ್ಕೆ ಛಟ್ಟಿ ಪೂಜೆಯನ್ನು ಮಾಡುತ್ತಾರೆ, ಪದ್ಧತಿ ಪ್ರಕಾರ ಸೂತಕವನ್ನು ತಗೆದ ನಂತರ ಸಂಜೆ ಮಗುವನ್ನು ತೊಟ್ಟಿಲಿಗೆ ಹಾಕಿ 'ನಾಮಕರಣ' ಮಾಡುವ ಪದ್ಧತಿಯಿದೆ. ಛಟ್ಟಿಪೂಜೆ ಎಂದರೆ (ಛಟ್ಟಿಮಾತಾ) ಛಟ್ಟಿ ದೇವತೆಯ ಹೆಸರಿನಲ್ಲಿ ಕಳಸ ಹೂಡಿ ತೊಟ್ಟಿಲನ್ನು ಸಿಂಗರಿಸಿ ಬಳಗದವರನ್ನು ಪೂಜೆಗೆ ಕರೆಸಿ ಪೂಜಿಸುವುದು. ಪೂಜೆಗೆ ಬರುವವರು ಎಲೆ-ಅಡಿಕೆ ಅಕ್ಕಿ ಬಾಳೆ ಹಣ್ಣು, ಹಣ ತಂದು ಪೂಜಾ ಕಳಸದ ಮುಂದೆ ಇಡುತ್ತಾರೆ, ಮಗುವಿನ ಸೋದರತ್ತೆ ಯಿಂದ ಮಗುವನ್ನು ತೊಟ್ಟಲಿಗೆ ಹಾಕಿಸಲಾಗುತ್ತದೆ, ಮಗುವಿನ ತಿಕದ ಕೆಳಗೆ (ಗಾಣ್ಣೋತಳ್ಳೇ) ಬೇಯಿಸಿದ ಗೋದಿಗೆ ಬೆಲ್ಲಸೇರಿಸಿ ಗಂಟುಕಟ್ಟಿ ಇಡುತ್ತಿದ್ದರು ಇದಕ್ಕೆ 'ಗುಗ್ಗರಿ' ಎಂದು ಕರೆಯುತ್ತಾರೆ. ಸೋದರತ್ತೆಯಾದವಳು (ಭುವ) ಮಗುವಿಗೆ ಹೆಸರಿಟ್ಟು ಗುಗ್ಗರಿ ಗಂಟನ್ನು ಬಾಯಿಂದ ಕಚ್ಚಿ (ಗುಗ್ಗರಿಪೊಟಕಿ) ಎತ್ತುತ್ತಾಳೆ. ಗುಗ್ಗರಿ ಗಂಟು ಎತ್ತುವಾಗ ಅಕ್ಕಪಕ್ಕದಲ್ಲಿದ್ದ ಹೆಣ್ಣುಮಕ್ಕಳು ಅವಳ ಬೆನ್ನಿನ ಮೇಲೆ ಮೆತ್ತಗೆ ಗುದ್ದುತ್ತಾರೆ. ನಂತರ ಛಟ್ಟಿ ಮಾತಾ ಹಾಡು ಹೇಳುತ್ತಾರೆ. ಕೆಲವರು ತೊಟ್ಟಲಿಗೆ ಹಾಕುವ ಕೆಲಸವನ್ನು ೧೧ ದಿನಕ್ಕೂ ಮಾಡುತ್ತಾರೆ.

ಬಾಣಂತಿಗೆ ಸೇವಿಗೆ ಬೇಯಿಸಿ ಅದಕ್ಕೆ ಬೆಲ್ಲ ಸಕ್ಕರೆ ಹಾಲು ಸೇರಿಸಿ ೫ ದಿನದವರೆಗೆ ಊಟ ಮಾಡಿಸುತ್ತಾರೆ. ೫ ದಿನದ ನಂತರ ರವೆಗಂಜಿಗೆ ಉಪ್ಪು/ಬೆಲ್ಲ ಸೇರಿಸಿ ಊಟ ಮಾಡಿಸುವರು. ನಂತರ ತೊಗರಿ, ಬೇಳೆ, ಸಪ್ಪೆಸಾರು, ರಾಗಿ, ಅಂಬಲಿ, ರಾಗಿಮುದ್ದೆ ಕೊಡುವರು. ಬಾಣಂತಿಗೆ ಕುರಿತಲೆ ಕಾಲು ಬೇಯಿಸಿ ಸಪ್ಪೆರಸ ಕುಡಿಸುವರು. ಜೊತೆಗೆ ಕಳ್ಳಭಟ್ಟಿ (ದಾರು) ಕುಡಿಸುತ್ತಿದ್ದರು.

ಹುಟ್ಟಿದ ಮಗುವಿಗೆ ಜೇನುತುಪ್ಪ (ಶಾಂತ್ರೋಫಿ) ನೆಕ್ಕಿಸುವರು. ನಂತರ ಮಗುವಿಗೆ ತಾಯಿಯ ಎದೆಯ ಹಾಲು ಕುಡಿಸುತ್ತಾರೆ.

ಋತುಮತಿ : ಗೋಸಂಗಿ ಬಳಗದಲ್ಲಿ ಯಾರೇ ಹೆಣ್ಣು ಮಕ್ಕಳು ಋತುಮತಿ (ಶ್ಯಾಣಿ ಹೊಯಿಚೆ) ಆಗಿದ್ದು ಗೊತ್ತಾದ ಕೂಡಲೇ ಆಕೆಯನ್ನು ಮನೆಯೊಳಗಿನಿಂದ ಹೊರಗೆ ಇರಿಸುತ್ತಿದ್ದರು. ಇವಳಿಗೆ ಪ್ರತ್ಯೇಕವಾದ ಡೇರೆಯನ್ನು ರಚಿಸಿ ೧೧ ದಿನಗಳವರೆಗೆ ಆ ಡೇರೆಯಲ್ಲಿ ಇರುಸುತ್ತಿದ್ದರು. ಇವಳ ಆರೈಕೆಯನ್ನು ತಾಯಿಯಾಗಲೀ ಅಥಾವ ಸೋದರತ್ತೆಯಾಗಲೀ ಮಾಡುತ್ತಿದ್ದರು. ಇವಳ ಬಟ್ಟೆ ಬರೆ ತಟ್ಟೆ ಲೋಟ ಹಾಸಿಗೆ ಎಲ್ಲವೂ ಪ್ರತ್ಯೇಕವಾಗಿ ಇಡಲಾಗುತ್ತಿತ್ತು. ಇತ್ತೀಚೆಗೆ ಈ ಆಚರಣೆಯಲ್ಲಿ ಸ್ವಲ್ಪ ಬದಲಾವಣೆ ಯಾಗಿದೆ. ಇಂದು ಮನೆಯ ಹೊರಭಾಗದಲ್ಲಿ ಮೈನೆರೆದ ಹುಡುಗಿಯನ್ನು ಕೂಡಿಸುತ್ತಾರೆ.

ಮೊದಲನೆಯ ದಿನ ಆ ಹುಡುಗಿಯ ತಲೆಗೆ ಹಾಲು ಹಾಕಿ ಸ್ನಾನ ಮಾಡಿಸುವರು. ಬಿಟ್ಟಟ್ಟ ಬಟ್ಟೆಯನ್ನು ಅಗಸರಿಗೆ ಕೊಡುವರು. ಮೈನೆರೆದ ಸೂತಕ ೧೧ ದಿವಸಗಳವರೆಗೂ ಇರುತ್ತದೆ. ೧೨ ದಿನಕ್ಕೆ ಹೆಣ್ಣಿಗೆ ಮಂಗಳ ಸ್ನಾನ ಮಾಡಿಸಿ ಅಗಸರನ್ನು ಕರೆಯಿಸಿ ಅವರಿಂದ ಮನೆಯ ಒಳಗೆಲ್ಲ (ಗುಡಾರ) ಗೋಮೂತ್ರ ಬೆರೆಸಿದ ನೀರನ್ನು ಚಿಮುಕಿಸಿ ಶುದ್ದೀ ಮಾಡಿಕೊಳ್ಳುತ್ತಾರೆ. ಹುಡುಗಿಗೂ ಅವರಿಂದ ಗೋಮೂತ್ರವನ್ನು ಚಿಮುಕಿಸಿ ನಂತರ ಆ ಹುಡುಗಿಯನ್ನು ಮನೆಯ ಒಳಗೆ ಕರೆದುಕೊಳ್ಳುವರು. ಅದೇ ದಿನ ಸಂಜೆ ತಮ್ಮ ಸಂಬಂಧಿಕರನ್ನು ಅಕ್ಕಪಕ್ಕದ ಹೆಣ್ಣುಮಕ್ಕಳನ್ನು ಆರತಿಗೆ ಕರೆಯುವರು, ಸಂಜೆ ಆರತಿ ಮಾಡಿ ಬಂದವರಿಗೆ ಸಿಹಿ ಊಟ ಮಾಡಿಸುವರು.

ಮರಣ : ಗೋಸಂಗಿ ಸಮುದಾಯದಲ್ಲಿ ಯಾರೇ ಮರಣ ಹೊಂದಲಿ ಗುಡಾರದ ಹೊರಭಾಗದಲ್ಲಿ ಹೆಣವನ್ನು ಮಲಗಿಸುತ್ತಾರೆ, ಹೆಣ ಮಲಗಿಸುವಾಗ ಕೆಲವರು ಕೈ ಕಾಲುಗಳನ್ನು ಮಡಚಿ ಮಲಗಿಸುತ್ತಾರೆ. ಇನ್ನು ಕೆಲವರು ನೀಳವಾಗಿ ಮಲಗಿಸುತ್ತಾರೆ. ಕಾಲಿನ ಹೆಬ್ಬೆರುಳುಗಳನ್ನು ಸೇರಿಸಿ ದಾರದಿಂದ ಕಟ್ಟುತ್ತಾರೆ. ಎರಡು ಕೈಗಳನ್ನು ಎದೆಯ ಮೇಲೆ ಬರುವಂತೆ ಇರಿಸುತ್ತಾರೆ. ಎದೆಯ ಮೇಲೆ ಕಬ್ಬಿಣದ ಚಾಕು ಅಥಾವ ಮಚ್ಚು ಇಡುತ್ತಾರೆ. ನಂತರ ಮಖವನ್ನು ತೊಳೆದು ವಿಭೂತಿ ಹಚ್ಚಿ ದೊಡ್ಡದಾಗಿ ಕುಂಕುಮ ಹಚ್ಚುತ್ತಾರೆ. ಬಾಯಿಗೆ ಅಕ್ಕಿ ಹಾಕಿ ಎಲೆ ಅಡಿಕೆ ಕುಟ್ಟಿ ಬಾಯಲ್ಲಿಡುತ್ತಾರೆ. ನಂತರ ಒಂದು ಬಟ್ಟೆಯಿಂದ ಶರೀರ ಮುಚ್ಚುತ್ತಾರೆ, ಮುಖ ಮಾತ್ರ ಕಾಣುತ್ತಿರುತ್ತದೆ. ತಲೆಯ ಭಾಗದಲ್ಲಿ ದೀಪ, ಊದುಬತ್ತಿ ಹಚ್ಚಿ ಇಡುತ್ತಾರೆ. ಶರೀರದ ಮೇಲೆ ಗಂಡೆಣ್ಣೆ ಸಿಂಪಡಿಸುತ್ತಾರೆ, ಇವರ ಮನೆಯಲ್ಲಿ ಸಾವಾಗಿದೆ ಎಂಬ ಸಂಕೇತಕ್ಕಾಗಿ ಮನೆಯ ಮುಂಭಾಗದಲ್ಲಿ ಕಟ್ಟಿಗೆ ಹಚ್ಚಿ ಹೊಗೆ ಬರುವಂತೆ ಮಾಡಿರುತ್ತಾರೆ.ಸತ್ತ ಮನೆಯವರು ಅಡಿಗೆ ಮಾಡುವುದಿಲ್ಲ. ಅಕ್ಕಪಕ್ಕದಲ್ಲಿರುವ ಕುಲಬಂಧುಗಳು ಅವರವರ ವನೆಗಳಲ್ಲಿ ರೊಟ್ಟಿ, ಕೆಂಪು ಚಟ್ನಿ, ಈರುಳ್ಳಿ ತಂದು ಅವರಿಗೆ ಊಟ ಮಾಡಿಸುವರು.

ಈ ಹಿಂದೆ ಸತ್ತ ಸುದ್ದಿಯನ್ನು ಎಲ್ಲಾ ಕಡೆ ತಿಳಿಸಲು ಭಾಟ್ ಅಥಾವ ತಮ್ಮವರಲ್ಲಿ ಯಾರಾನ್ನಾದರೂ ಕಳುಹಿಸಿ ಸುದ್ದಿ ಮುಟ್ಟಿಸುವ ವ್ಯವಸ್ಥೆ ಇತ್ತು. ಏಕೆಂದರೆ ಈ ಹಿಂದೆ ಪತ್ರ ವ್ಯವಹಾರಗಳಿರಲಿಲ್ಲ. ಮಧ್ಯಾಹ್ನದ ನಂತರ ಸತ್ತರೆ ಬಂಧು ಬಳಗದವರು ಬಂದು ಸೇರಲು ಆಗುತ್ತಿರಲಿಲ್ಲ ಆದ್ದರಿಂದ ಇಡೀರಾತ್ರಿಯಲ್ಲಿ ಯಾರೂ ನಿದ್ದೆ ಮಾಡದಂತೆ ಹೆಣದ ಹತ್ತಿರ ಬೆಳಗಾಗುವವರೆಗೂ ಕಾಯುವರು. ರಾತ್ರಿಯಲ್ಲಿ ಹೆಂಡ ಸಾರಾಯಿಗಳ ಮೇಜುವಾನೆ ಇರುವುದುಂಟು, ಶರೀರದ ಒಳಗೆ ಗಾಳಿ ಹೋಗ ಬಾರದೆಂದು ಮೂಗಿಗೆ ಹತ್ತಿಯನ್ನು ಇರಿಸುತ್ತಾರೆ.

ಮಾರನೆಯ ದಿನ ಸುಮಾರು ೧೦ ಗಂಟೆಯ ನಂತರ ಕುಣಿ ತೆಗೆಯಲು ಜನರನ್ನು ಕಳುಹಿಸುವರು.ಕುಣಿತೆಗೆಯಲಿಕ್ಕೆ ಹೋದವರು ಸಮಾದಿ ಆದ ನಂತರವೇ ಆ ಜಾಗದಿಂದ ವಾಪಾಸು ಬರಬೇಕು, ಅಲ್ಲಿಯವರೆಗೆ ಅವರು ಸ್ಮಶಾನದಲ್ಲಿಯೇ ಇರಬೇಕು. ಅನುಭವವಿರುವ ವ್ಯಕ್ತಿಯಗಳನ್ನು ಕಳುಹಿಸಿ ಚಟ್ಟಾದ ಸಾಮಾನು ಮೊಜೆ

ಸಾಮಾನು ಹೊಸಬಟ್ಟೆ ನೀರು ಕಾಯಿಸಲು ಮತ್ತು ಅಗ್ಗಿಷ್ಟಿಕೆ ಒಯ್ಯಲು ಬೇಕಾಗುವ ಮಡಕೆ ಹಗ್ಗ ಇತ್ಯಾದಿ ಸಾಮಾನುಗಳನ್ನು ತರಲು ಕಳುಹಿಸುತ್ತಿದ್ದರು.

ಎಲ್ಲಾ ಬಂಧು ಬಾಂಧವರು ಶವ ಸಂಸ್ಕಾರಕ್ಕೆ ಬಂದಿರುವುದೆಂದು ತಿಳಿದು ಬಳಿಕ ಹೊಸ ಮಡಕೆಯಲ್ಲಿ ನೀರನ್ನು ತುಂಬಿ ಮನೆಯ ಮುಂಭಾಗದಲ್ಲಿ ಒಲೆಹೂಡಿ ಅದರ ಮೇಲೆ ನೀರಿನ ಮಡಿಕೆಯನ್ನಿಟ್ಟು ಉಗರು ಬೆಚ್ಚಗಿರುವಂತೆ ನೀರನ್ನು ಕಾಯಿಸುವರು. ಹೆಣವನ್ನು ಹೊರಗಡೆತಂದು ಸ್ನಾನ ಮಾಡಿಸಿ ಅದಕ್ಕೆ ಹೊಸ ಬಟ್ಟೆಯನ್ನು ಹೊದಿಸುವರು, ತರುವಾಯ ಪಕ್ಕದಲ್ಲಿ ಗಂಡಸರು ಸೇರಿ ಸಿದಿಗೆ (ಚಟ್ಟ) ಕಟ್ಟಿ ಅದರ ಮೇಲೆ ಹುಲ್ಲು ಹಾಕಿ ಬಟ್ಟೆಯನ್ನು ಹಾಸಿ ಹೆಣವನ್ನು ಚಟ್ಟದ ಮೇಲೆ ಮಲಗಿಸುತ್ತಾರೆ, ತರುವಾಯ ಹಣೆಗೆ ವಿಭೂತಿ ಕುಂಕುಮ ಹಚ್ಚಿ ಹಣೆಯ ಮೇಲೆ ಒಂದು ನಾಣ್ಯವನ್ನಿಟ್ಟು ಕೆಳಗೆ ಬೀಳದಂತೆ ಕಟ್ಟಿ ಹೆಣಕ್ಕೆ ಹೂವುಗಳಿಂದ ಅಲಂಕಾರ ಮಾಡಿ ಹಾಕಿದ ಹೂವು ಗಳಾಗಲೀ ಹೆಣವಾಗಲೀ ಕೆಳಗೆ ಬೀಳದ ಹಾಗೆ ಹಗ್ಗದಿಂದ ಬಿಗಿಯಾಗಿ ಕಟ್ಟುತ್ತಿದ್ದರು. ಮನೆಯವರು ಬಂದ ನೆಂಟರಿಷ್ಟರೂ ಹಾಗೂ ಇತರೆಯವರೆಲ್ಲರೂ ಪೂಜೆಸಲ್ಲಿಸಿ ನಮಸ್ಕರಿಸುತ್ತಿದ್ದರು. ಮನೆಯ ಹಿರಿಯ ಮಗನು ತಲೆ ಬೋಳಿಸಿಕೊಂಡು ಸ್ನಾನ ಮಾಡಿ ಅಗ್ಗಿಷ್ಟಿಕೆಯ ಮಡಕೆಯನ್ನು ಹಿಡಿದು ಮುಂದೆ ನಡೆದರೆ ಆತನ ಹಿಂದೆ ನಾಲ್ಕು ಜನ ಸೇರಿ ಚಟ್ಟ ಹೊತ್ತುಕೊಂಡು ಸ್ಮಶಾನದತ್ತ ಹೋಗುವರು. ಹೋಗುವಾಗ ಹೆಣದ ಮೇಲೆ ಚಿಲ್ಲರೆ ಕಾಸು, ಎಲೆ ಅಡಿಕೆ, ಮಂಡಕ್ಕಿ ಹಾಗೂ ಸಾಸುವೆಯನ್ನು ಹಾಕುತ್ತಾರೆ, ಹಾಗೂ ಎಲ್ಲರು ರಾಮನಾಮವನ್ನು ಪಠಿಸುತ್ತ ಸಾಗುವರು.ಸಂಸ್ಕಾರಕ್ಕೆ ಬಂದವರೆಲ್ಲರು ಹೆಗಲು ಕೊಡುತ್ತಾರೆ, ಸ್ಮಶಾನದ ಗಡಿಯ ಹತ್ತಿರ ಹೋಗುತ್ತಿದ್ದ ಹಾಗೆ ಚಟ್ಟವನ್ನು ಗಡಿಕಲ್ಲಿನ ಮೇಲೆ ಇಳಿಸಿ ಮಗನ ಕೈಯಲ್ಲಿದ್ದ ಅಗ್ಗಿಷ್ಟಿಕೆಯ ಮಡಕೆ ಯನ್ನು ಒಡೆಯುತ್ತಾರೆ. ಮೊದಲನೆ ಸಲ ಚಟ್ಟ ಹೊತ್ತ ನಾಲ್ಕು ಜನರಲ್ಲಿ ಮುಂದೆ ಹೊತ್ತವರು ಹಿಂದಕ್ಕೂ, ಹಿಂದೆ ಹೊತ್ತವರು ಮುಂದಕ್ಕೆ ಬಂದು ಪುನಃ ಚಟ್ಟ ಹೊತ್ತಕೊಂಡು ಕುಣಿಯ ಹತ್ತಿರ ಹೋಗಿ ಕುಣಿಗೆ ಮೂರು ಸುತ್ತು ಹಾಕಿ ದಕ್ಷಣಕ್ಕೆ ತಲೆ ಬರುವಂತೆ ಚಟ್ಟವನ್ನು ಕೆಳಗೆ ಇಳಿಸುವರು. ಅನುಭವವಿರುವಂತಹ ಇಬ್ಬರನ್ನು ಕುಣಿಯ ಒಳಗೆ ಇಳಿಸಿ ಗೋಮಯದಿಂದ ಕುಣಿಯನ್ನು ಶುದ್ಧಗೊಳಿಸಿ ವಿಭೂತಿ ಹಚ್ಚುವರು. ತಲೆಯ ಭಾಗದ ಕಡೆ ಗೋಡೆಯಲ್ಲಿ ಸ್ವಲ್ಪ ಜಾಗ ಮಾಡಿ ದೀಪ ಹಚ್ಚಿ ಇಡುತಾರೆ.

ನಂತರ ಹೂವು ಹಣ್ಣು ಕಾಯಿಗಳಿಂದ ಕುಣಿಯ ಪೂಜೆಯನ್ನು ಮಾಡುತ್ತಾರೆ. ಮೇಲಿದ್ದವರು ಶವಕ್ಕೆ ಕಟ್ಟಿದ ಹಗ್ಗವನ್ನು ಕೊಯ್ದು ಹೂವುಗಳನ್ನೆಲ್ಲ ತಗೆದು ಹೆಣವನ್ನು ಕುಣಿಯಲ್ಲಿ ಇಳಿಸುತ್ತಾರೆ, ಕುಣಿಯ ಒಳಗಡೆಯಿದ್ದವರು ಶವವನ್ನು ಸರಿಯಾದ ರೀತಿಯಲ್ಲಿ ಮಲಗಿಸಿ ಗಂಡಾಗಿದ್ದರೆ ಉಡದಾರವನ್ನು ಕೊಯ್ಯುವರು, ಹೆಣ್ಣಾಗಿದ್ದರೆ ಶರೀರದ ಮೇಲಿರುವ ಬಂಗಾರದ ವಸ್ತುಗಳೇನಿದ್ದರೂ ತಗೆದು ಅವರ ಸಂಬಂಧಿಗಳ ಕಡೆ ಕೊಡುವರು. ಕುಣಿಯಲ್ಲಿದ್ದವರು ಮೇಲೆ ಬಂದ ತರುವಾಯ ಮೊದಲಿಗೆ

ಹಿರಿಯ ಮಗನು ಹೂವನ್ನು ಹಾಗು ಮೂರು ಹಿಡಿ ಮಣ್ಣನ್ನು ಹಾಕುತ್ತಾನೆ.ತರುವಾಯ ಬಂದವರೆಲ್ಲರೂ ಕೊನೆಯ ದರ್ಶನ ಮಾಡಿ ಮೂರು ಹಿಡಿ ಮಣ್ಣನ್ನು ಎಡಗೈಯಿಂದ ಹಾಕುವರು. ತರುವಾಯ ಸಲಿಕೆಯಿಂದ ಕುಣಿಯನ್ನು ಮುಚ್ಚಿ ಮಣ್ಣನ್ನು ಸಮಮಾಡಿ ತಲೆಯ ಭಾಗದಲ್ಲಿ ಒಂದು ಕಲ್ಲನ್ನು ನೆಡುವರು, ಅದರ ಪಕ್ಕದಲ್ಲಿ ತುಳಿಸಿ ಅಥಾವ ಹೂವಿನ ಗಿಡವನ್ನು ನೆಟ್ಟು ಪುನಃ ಎಲ್ಲರೂ ಪೂಜೆ ಮಾಡುವರು. ಸತ್ತ ವ್ಯಕ್ತಿಗೆ ಹೆಂಡತಿಯಿದ್ದರೆ ವಿಧವೆಯರು ಆಕೆಯನ್ನು ಸಮಾದಿಯ ಬಳಿ ಕರೆತಂದು ಬಳೆ ಒಡೆದು ತಾಳಿ, ಮೂಗುತಿ, ಕಾಲುಂಗರ ತೆಗೆಸುವರು. ತವರು ಮನೆಯಿಂದ ತಂದ ಹೊಸ ಬಟ್ಟೆಯನ್ನು ತೊಡಿಸಿ ಹಳೇ ಬಟ್ಟೆಗಳನ್ನು ಅಲ್ಲಿಯೇ ಬಿಟ್ಟು ಬರುತ್ತಾರೆ. ಮೂರು ದಿನದ ತಿಥಿ ಯಾವಾಗ ಎಂಬುದನ್ನು ಅಲ್ಲಿಯೇ ಸಾರಿ ಸತ್ತು ೩ ನೇ ದಿನಕ್ಕೆ ಆತನ ತಿಥಿ ಕಾರ್ಯವನ್ನು ಮಾಡುತ್ತಿದ್ದರು ಹನ್ನೊಂದನೇ ದಿನಕ್ಕೆ ಒಳಗೆ ಕರೆದು ಕೊಳ್ಳುವ ಕಾರ್ಯ ಈ ಸೂತಕ ಕೇವಲ ೩ ದಿನ ಮಾತ್ರ

**ಮೂರು ದಿನದ ಕಾರ್ಯ:** ವ್ಯಕ್ತಿ ಸತ್ತ ಮೂರನೇ ದಿನಕ್ಕೆ ಮನೆಯ ಹೊರಭಾಗದಲ್ಲಿ ಒಲೆ ಹೂಡಿ ಅದರ ಮೇಲೆ ಹೊಸಮಡಿಕೆ ಇರಿಸಿ ಅಂಗೈಗೆ ಬಂದಷ್ಟು ಒಂದು ಬಾರಿ, ಹಿಂಗೈಯಲ್ಲಿ ಒಂದು ಬಾರಿ,ಪುನಃ ಮುಂಗೈಯಲ್ಲಿ ಒಂದುಬಾರಿಯಂತೆ ಅಕ್ಕಿಯನ್ನು ಅಳತೆ ಮಾಡಿ ಮಡಿಕೆಗೆ ಹಾಕಿ ಅದು ಬೇಯುವಷ್ಟು ನೀರನ್ನು ಬೆರಸಿ,ಅದರೊಳಗೊಂದು ಮೊಟ್ಟೆ ಹಾಕಿ ಅನ್ನ ಮಾಡುತ್ತಾರೆ, ತರುವಾಯ ತಿಂಡಿ ತಿನಿಸುಗಳೊಂದಿಗೆ ಸ್ಮಶಾನಕ್ಕೆ ತೆರಳುತ್ತಾರೆ, ಸ್ಮಶಾನದಲ್ಲಿ ಮೊದಲು ಸಮಾದಿಯನ್ನು ಸರಿಪಡಿಸಿ ನೀರು ಸಿಂಪಡಿಸಿ ಅದರಮೇಲೆ ತಾವು ತಯಾರಿಸಿಕೊಂಡು ತಂದ ಎಕ್ಕೆಎಲೆಯ ಪತ್ರಾವಳಿಯ ಮೇಲೆ ಬೇಯಿಸಿದ ಅನ್ನ, ಮೊಟ್ಟೆಯನ್ನು ಇರಸುತ್ತಾರೆ,ನಂತರ ಅದರ ಮೇಲೆ ಹಾಲು ಮೊಸರು ಬಿಟ್ಟು ತಾವು ತಂದಿರುವ ಎಲ್ಲಾ ತಿಂಡಿತಿನಿಸು ಗಳನ್ನು, ಎಲೆ ಅಡಿಕೆ ಬಾಳೆಹಣ್ಣುಗಳನ್ನಿಡುತ್ತಾರೆ, ತರುವಾಯ ಹಿರಿಯ ಮಗನಿಂದ ಸಮಾದಿಯ ತಲೆಯ ಭಾಗದಲ್ಲಿ ಹಾಲು, ಸರಾಯಿಗಳನ್ನು ಹಾಕಿಸಿ ಆತನಿಂದಲೇ ಮೊದಲು ಪೂಜೆ ಮಾಡಿಸಲಾಗುತ್ತದೆ, ತರುವಾಯ ಬಂಧುಬಳಗದವರು ಅದೇ ರೀತಿ ಸಮಾದಿ ಪೂಜೆ ಮಾಡಿ ದೂರದಲ್ಲಿ ಕುಳಿತುಕೊಳ್ಳುತ್ತಾರೆ, ಕಾಗೆ ಬಂದು ಎಡೆ ಮುಟ್ಟಿದ ತರುವಾಯ ಎಲ್ಲರೂ ಮನೆಗೆ ತೆರಳುತ್ತಾರೆ, ಅಕಸ್ಮಾತ್ ಕಾಗೆ ಬರುವುದು ತಡವಾದರೆ ತಮ್ಮಿಂದ ಏನೋ ತಪ್ಪಾಗಿದೆಯಂದು ತಿಳಿದು ತಮ್ಮ ತಪ್ಪನ್ನು ಮನ್ನಿಸುವಂತೆ ಕೇಳುತ್ತಾರೆ, ಅಲ್ಲಿಗೂ ಕಾಗೆ ಬಾರದಿದ್ದಲ್ಲಿ ಎಡೆಯನ್ನು ಹಸುವಿಗೆ ಕೊಡಲಾಗುವುದು, ಇಲ್ಲವೇ ನೀರಿಗೆ ಬಿಡಲಾಗುವುದು, ಅವರು ಮನೆಗೆ ಬಂದ ನಂತರ ಕೂಗುವ ಹುಂಜವನ್ನು ವ್ಯಕ್ತಿ ಪ್ರಾಣ ಬಿಟ್ಟ ಜಾಗದಲ್ಲಿ ಕೊಯ್ಯುತ್ತಾರೆ ಆ ಹುಂಜದ ಮಾಂಸದ ಅಡುಗೆ ಮಾಡುವರು, ಮುಖ್ಯವಾಗಿ ಕೋಳಿಯ ತೊಡೆ,ಗುಡುದ, ಕಲೀಜಗಳನ್ನು ಬೆಂಕಿಯಲ್ಲಿ ಸುಟ್ಟು ಚಿಕ್ಕ ಚಿಕ್ಕ ಚೂರುಗಳನ್ನಾಗಿ ಮಾಡಿ ಒಂದು ಸಣ್ಣ ಪಾತ್ರೆಯಲ್ಲಿಡುತ್ತಾರೆ, ಚಿಕ್ಕ ಕಲ್ಲಿನ ಹರಳುಗಳು, ತುಂಡಾಗಿಸಿದ ಗರಿಕೆ ಹುಲ್ಲನ್ನು ಇನ್ನೊಂದು ಪಾತ್ರೆಯಲ್ಲಿ

ಇರಿಸುತ್ತಾರೆ, ತಂದಿರುವ ಗರಿಕೆ ಹುಲ್ಲಿನಲ್ಲಿ ಉಂಗುರವೊಂದನ್ನು ಮಾಡಿರುತ್ತಾರೆ, ಪ್ರಾಣಬಿಟ್ಟ ಜಾಗದಲ್ಲಿ ಸಾರಿಸಿ ಕಳಸವೊಂದನ್ನು ಸ್ಥಾಪಿಸುವರು,ಅದರ ಮೇಲೆ ಹೊಸ ಬಟ್ಟೆಗಳನ್ನು ಹಾಕುವರು, ಹಿರಿಯ ಮಗನು ಎಡಗೈ ಉಂಗುರದ ಬೆರಳಿಗೆ ಗರಿಕೆ ಉಂಗುರ ತೊಟ್ಟುಕೊಂಡು ಅದೇ ಕೈಯಿಂದ ಮೊದಲಿಗೆ ಸರಾಯಿಯನ್ನು ಕಳಸದ ಮುಂಭಾಗದಲ್ಲಿ ಭೂಮಿಗೆ ಹಾಕುವನು, (ಗಂಡು ಮಕ್ಕಳಿಲ್ಲದಿದ್ದ ಪಕ್ಷದಲ್ಲಿ ವಾರಸುದಾರರಾಗುವವರು ಕಾರ್ಯ ನಡೆಸಿಕೊಡುವರು) ಅದೇ ಜಾಗದಲ್ಲಿ ಬಟ್ಟಲನಲ್ಲಿಟ್ಟ ಸುಟ್ಟ ಮಾಂಸದ ಚೂರು, ಗರಿಕೆ, ಕಲ್ಲಹರಳುಗಳನ್ನು ಮೂರುಸಾರಿ ಹಾಕಬೇಕು, ನಂತರ ಎಡಗೈಯಿಂದ ಲೋಬಾನವನ್ನು ಹಾಕುವನು, ಸಾಮಾನ್ಯವಾಗಿ ಸತ್ತ ವ್ಯಕ್ತಿ ಬಳಸುತ್ತಿದ್ದ ಬೀಡಿ,ಸಿಗರೇಟು, ಎಲೆಅಡಿಕೆ, ಹೊಗೆಸೊಪ್ಪು ಹಾಗು ತಿಂಡಿ ತನಿಸುಗಳನ್ನು ಕಳಸದ ಮುಂಭಾಗದಲ್ಲಿರಿಸುವರು,ಹಾಗೆ ಬಾಳೆಎಲೆಯಲ್ಲಿ ನೈವೇದ್ಯ ಇಡುವರು, ಹಿರಿಯ ಮಗನೇ ಮೊದಲಿಗೆ ಪೂಜೆ ಮಾಡಬೇಕು, ತರುವಾಯ ಇನ್ನುಳಿದವರು ಅದೇ ರೀತಿ ಪೂಜೆ ಮಾಡುವರು. ಊಟಕ್ಕೆ ಕೂಡುವ ಮೊದಲು ಹೊತ್ತವರ ಹೊರೆ ಇಳಿಸುವ ಕಾರ್ಯ ಮಾಡುವರು, ಶವವನ್ನು ಮೊದಲಿಗೆ ಹೊತ್ತ ನಾಲ್ಕು ಜನಕ್ಕೆ ಕೊಬ್ಬರಿ ಎಣ್ಣೆಯನ್ನು ಹೆಗಲಿಗೆ, ತಲೆಗೆ ಹಚ್ಚಿ ಸ್ನಾನ ಮಾಡಿಸುತ್ತಾರೆ,ಇದಕ್ಕೆ ಖಾಂಧೋ ಧೊವೆಂಡೊ(ಹೆಗಲು ತೊಳೆಸುವುದು)ಎನ್ನುವರು. ಶವವನ್ನು ಹೊತ್ತವರಿಗೆ ಮೊದಲು ಊಟ ಮಾಡಿಸಿದ ತರುವಾಯ ಇನ್ನುಳಿದವರು ಊಟ ಮಾಡುವರು.

**ಹನ್ನೊಂದನೇ ದಿನದ ಕಾರ್ಯ:** ವ್ಯಕ್ತಿ ಸತ್ತ ಹನ್ನೊಂದನೇ ದಿನಕ್ಕೆ ಮನೆಯನ್ನು ತೊಳೆದುಕೊಂಡು ಸಿಹಿ ಅಡುಗೆ ಮಾಡಿ ಸತ್ತವ್ಯಕ್ತಿಯ ಸಂಕೇತವಾಗಿ ಕಳಸವಿರಿಸಿ ಪೂಜೆ ಸಲ್ಲಿಸುವರು, ಅಂದು ಬಂದು ಬಾಂದವರಿಗೆಲ್ಲ ಊಟ ಹಾಕುವರು, ಮುಖ್ಯವಾಗಿ ಅಂದು ಸತ್ತಾತನ ಆತ್ಮಕ್ಕೆ ಶಾಂತಿ ಸಿಗಲೆಂದು ಮನೆಯಲ್ಲಿ ಒಬ್ಬರು ಉಪವಾಸವಿರುವರು, ಪೂಜೆಯ ನಂತರ ಉಪವಾಸವಿದ್ದವನಿಗೆ ಮೊದಲಿಗೆ ಊಟ ಮಾಡಿಸುವರು. ತಿಂಗಳಿಗೆ ಒಂದು ದಿನ ಬಾಕಿ ಇರುವಾಗ ಸಾರ್ವತ್ರಿಕವಾಗಿ ಪೂಜಾಕಾರ್ಯ ನಡೆಸುವರು, ಈ ಕಾರ್ಯಕ್ಕೆ ಸಮುದಾಯದವರೆಲ್ಲಾ ಸೇರುತ್ತಾರೆ.

ಗೋಸಂಗಿ ಸಮುದಾಯದಲ್ಲಿ ೯೯ ಭಾಗ ಹೆಣವನ್ನು ಭೂಮಿಯಲ್ಲಿ ಹೂಳುವುದೇ ಹೊರತು ಸುಡುವ ಪದ್ಧತಿ ಇಲ್ಲ. ಕೆಲವು ಸಂದರ್ಭದಲ್ಲಿ ಮಾತ್ರ ಸುಡುವ ಪದ್ಧತಿಯಿರುತ್ತೆ.

೧) ಬಾಣಂತಿಯಾಗಿದ್ದು ಸತ್ತಾಗ

೨) ಶರೀರದಲ್ಲಿ ತೊನ್ನಿದ್ದರೆ

೩) ವಿಷದಿಂದ ಸಾವನ್ನಪ್ಪಿದರೆ ಮಾತ್ರ ಸುಡುವ ಪದ್ಧತಿ ಇದೆ.

**ಧಾರ್ಮಿಕ ವಿಧಿ-ವಿಧಾನಗಳು ದೇವರು, ಧಾರ್ಮಿಕ ಕೇಂದ್ರಗಳು**

ಗೋಸಂಗಿಗಳು ಮುಖ್ಯವಾಗಿ ಹೋಳಿ, ದಸರ, ದೀಪಾವಳಿ, ಆಷಾಡ ಮಾಸದ ಹಬ್ಬಗಳನ್ನು ಆಚರಿಸುವರು, ಮಾತ್ರ ದೇವತೆಗಳಾದ ಆದಿಶಕ್ತಿ, ತುಳಜಾಭವಾನಿ, ಅಂಬಾಭವಾನಿ, ಕಾಳಿಕಾಂಬ, ಸಿತಳಾಭವಾನಿ, ದುರ್ಗಾಂಬ, ಸೌದತ್ತಿ ಯಲ್ಲಮ್ಮ

ಮುಂತಾದ ದೇವತೆಗಳನ್ನಲ್ಲದೆ ಮೈಲಾರ, ತಿರುಪತಿ ತಿಮ್ಮಪ್ಪ, ಆಂಜನೇಯ ಮುಂತಾದ ವುಗಳನ್ನು ಆರಾಧಿಸುತ್ತಾರೆ.

ಪ್ರತಿವರ್ಷ ಆಷಾಡ ಮಾಸದಲ್ಲಿ ಕಾಳಿಯನ್ನು ವಿಶೇಷವಾಗಿ ಪೂಜಿಸುತ್ತಾರೆ. ಮಧ್ಯರಾತ್ರಿಯ ನಂತರ ಈ ಪೂಜೆ ಪ್ರಾರಂಭಿಸುವರು. ಮುಖ್ಯವಾಗಿ ದೇವಿಯನ್ನು ನದಿಯ ಬಳಿ ಹೊಯ್ದು ದೇವತೆಗಳ ವಿಗ್ರಹಗಳನ್ನು ಶುಭ್ರವಾಗಿ ತೊಳೆಯುವರು ೫ ತಂಬಿಗೆಗಳಲ್ಲಿ ಗಂಗೆಯನ್ನು ತುಂಬಿ ನದಿ ದಂಡೆಯ ಮೇಲಿರಿಸುವರು, ಅವುಗಳ ಮುಂದೆ ದೇವರನ್ನು ಇರಿಸುವರು, ದೇವತೆಗಳ ಹಿಂಭಾಗದಲ್ಲಿ ಸಾಲಾಗಿಟ್ಟ ತಂಬಿಗೆಗಳಿಗೆ ಕಂಕಣ ಕಟ್ಟಿ ಎಲ್ಲರು ಸೇರಿ ಪೂಜೆ ಮಾಡಿ ಎಡೆ ನೈವೇದ್ಯಗಳನ್ನು ಅರ್ಪಿಸುತ್ತಾರೆ. ೫ ಜನ ಮುತ್ತೈದೆಯರ ತಲೆಯ ಮೇಲೆ ಒಂದೊಂದು ತಂಬಿಗೆಯನ್ನು ಹೊರೆಸಿ ಮಡಿಯಿಂದ ಗಂಗೆಯನ್ನು ಮನೆಗೆ ತರುತ್ತಿದ್ದರು. ಮನೆಯ ಒಂದು ಭಾಗದಲ್ಲಿ ಶುದ್ಧೀಕರಣ ಮಾಡಿದ ಸ್ಥಳದಲ್ಲಿ ಈ ಗಂಗೆಯನ್ನು ಹಾಗೂ ದೇವತೆಗಳನ್ನು ನೆಲೆಗೊಳಿಸುವರು.ನಂತರ ಪುನಃ ಪೂಜೆಯನ್ನು ಮಾಡಿ ದೇವರನ್ನು ಅಲಂಕಾರ ಮಾಡಿ ಎಡೆಗೆ ಮಾಡಿದ ಗೋದಿ ರೊಟ್ಟಿ ಮತ್ತು ಗಳವಾಣಿ ತುಪ್ಪ ಬೆರೆಸಿ ನೈವೇದ್ಯ ಮಾಡುತ್ತಾರೆ, ಮಹಾ ಮಂಗಳಾರತಿ ಆದ ನಂತರ ಪೂರ್ವದಲ್ಲಿ ನರ ಬಲಿ ಕೊಡುವ ಪದ್ಧತಿಯಿದ್ದಿತಂತೆ, ಆದರೆ ಇಂದು ನರಬಲಿ ಪದ್ಧತಿ ನಿಂತುಹೋಗಿದೆ, ನರಬಲಿಯ ಬದಲಿಗೆ ಐದು ಕೆಂಪು ಹುಂಜಗಳನ್ನು ಬಲಿಕೊಡುವರು.

ಸಿತಳಾದೇವಿ: ಈ ಪೂಜೆ ಮಾಡುವ ಪೂರ್ವದಲ್ಲಿ ಮನೆ ಶುದ್ಧಗೊಳಿಸಿ ತರುವಾಯ ಕಳಸವನ್ನು (ದೇವರ ಸಂಕೇತವಾಗಿ)ಹೂಡಿ,ಸಪ್ಪೆಅನ್ನ ಮಾಡಿ ಅದಕ್ಕೆ ಬೆಲ್ಲ ತುಪ್ಪಗಳನ್ನು ಬೆರಸಿ ಐದು ಕಂಚಿನ ತಟ್ಟೆಗಳಲ್ಲಿ ಹಾಕಿ ಕಳಸದ ಮುಂದಿರುಸುವರು, ಪೂಜೆಗೆ ಬಂದ ದೈವದ ಹೆಣ್ಣುಮಕ್ಕಳಿಗೆ ಉಡಿ ತುಂಬಿಸುತ್ತಾರೆ, ತರುವಾಯ ಐದುಜನ ಮುತ್ತೈದೆಯರಿಗೆ ಒಂದೊಂದರಂತೆ ನೈವೇದ್ಯವಿರಿಸಿದ ಕಂಚಿನ ತಟ್ಟೆಗಳನ್ನು ಕೊಟ್ಟು ಕಳಿಸುವರು.

**ದಸರೆಯ ಹಬ್ಬ:** ಹಬ್ಬದ ಸಮಯದಲ್ಲಿ ೯ ದಿನಗಳ ಕಾಲ ದೇವರುಗಳನ್ನು ಪಟ್ಟಕ್ಕೆ ಕೂರಿಸಿ ೧೦ನೇ ದಿನಕ್ಕೆ ಬನ್ನಿ ಮುಡಿಯುವ ಸಂಪ್ರದಾಯ ಇವರಲ್ಲಿದೆ, ಈ ಸಂದರ್ಭ ದಲ್ಲಿ ಸಿಂಥೆ ಮನೆತನದವರು ಅಷ್ಟಮಿ ದಿವಸ ಶ್ರೀ ಮೈಲಾರಲಿಂಗ ಸ್ವಾಮಿಗೆ ದೋಣಿ ನೀಡಿಸುವ ಒಂದು ಪೂಜಾ ಕಾರ್ಯಕ್ರಮ ನಡೆಸುತ್ತಾರೆ.

ಆ ದಿನ ಬೆಳಿಗ್ಗೆ ಎದ್ದು ಮನೆಯನ್ನು ಗೋಮೂತ್ರದಿಂದ ಶುದ್ಧಿ ಮಾಡಿ ಗೊರವಯ್ಯ ನವರನ್ನು (ಗ್ವಾರಪ್ಪ) ಕರೆಯಿಸಿ, ಕರಿಯ ಕಂಬಳಿಯನ್ನು ನೆಲದ ಮೇಲೆ ಗದ್ದುಗೆ ಮಾಡಿ, ಹರಿವಾಣದಲ್ಲಿ ಅಕ್ಕಿ ಹಾಕಿ ಮಧ್ಯದಲ್ಲಿ ದೀಪ ಹಚ್ಚಿಟ್ಟು ಅಕ್ಕಿ ತುಂಬಿದ ಹರಿವಾಣವನ್ನು ಗದ್ದಿಗೆಯ ಮಧ್ಯಭಾಗದಲ್ಲಿಟ್ಟು ಹರಿವಾಣದಲ್ಲಿ ಎಲೆ ಅಡಿಕೆ ದಕ್ಷಿಣೆಯನ್ನು ಇರಿಸಿ ಕೊಬ್ಬರಿ ಚೂರುಗಳಿಂದ ತುಂಬಿರುವ ಬಟ್ಟಲನ್ನಿಟ್ಟು ಗದ್ದುಗೆಗೂ ಹರಿವಾಣ ದಲ್ಲಿರುವ ದೀಪಕ್ಕೆ ವಿಭೂತಿ, ಗಂಧ, ಕುಂಕುಮ, ಅರಿಶಿಣ, ಪುಷ್ಪಗಳಿಂದ ಅಲಂಕರಿಸಿ ಹಣ್ಣು ಮತ್ತು ತೆಂಗಿನಕಾಯಿಯನ್ನು ಹರಿವಾಣದಲ್ಲಿಡುತ್ತಾರೆ.

ಗದ್ದುಗೆಯ ಪಕ್ಕದಲ್ಲಿ ಒಂದು ಮಣೆಯನ್ನಿಟ್ಟು ಗೊರವಯ್ಯ ತಂದಿರುವ ದೋಣಿಯನ್ನು ಮಣೆಯ ಮೇಲಿಟ್ಟು ಅದರೊಳಗೆ ಹಣ್ಣುತುಪ್ಪವನ್ನು ಹಾಕುವರು (ಬಾಳೆ ಹಣ್ಣು ತುಪ್ಪ ಮತ್ತು ಬೆಲ್ಲ ಈ ಮೂರರ ಮಿಶ್ರಣವೇ ಹಣ್ಣುತುಪ್ಪ). ಎಡೆಗಾಗಿ ಮಾಡಿರುವ ಅನ್ನ, ಸಾರು, ಪಲ್ಯ ಹಾಗೂ ಹೋಳಿಗೆಯಿಂದ ದೋಣಿ ತುಂಬಿಸಿ ತೆಂಗಿನ ಕಾಯಿಯನ್ನು ಒಡೆದು ದೀಪವನ್ನು ಹಚ್ಚಿ ಮನೆಯವರೆಲ್ಲರೂ ಪ್ರಥಮವಾಗಿ ಪೂಜೆ ಮಾಡುತ್ತಾರೆ. ಪೂಜೆಗೆ ಬಂದವರೆಲ್ಲರೂ ಭಕ್ತಿಯಿಂದ ನಮಸ್ಕರಿಸಿ ಆಗ ಎಲ್ಲರೂ ಒಕ್ಕೊರಲಿನಿಂದ ಏಳುಕೋಟಿ, ಏಳುಕೋಟಿ ಚಾಂಗಭಲೋ ಚಾಂಗ್ ಭಲೋ ಎಂದು ಕೂಗುತ್ತಾರೆ. ಅದೇ ಸಂದರ್ಭದಲ್ಲಿ ಗೊರವಯ್ಯನವರು ಡಮರುಗವನ್ನು ಢಮ ಢಮ ಎಂದು ಭಾರಿಸುತ್ತಾ ಅವೇಶಭರಿತವಾಗಿ ಗದ್ದುಗೆಯ ಸುತ್ತ ಕುಣಿಯುತ್ತಾರೆ.

ಮನೆಯ ಗಂಡು ಮಕ್ಕಳೆಲ್ಲ ಗದ್ದುಗೆಯ ಸುತ್ತಮುತ್ತು ಕುಳಿತುಕೊಂಡು, ಗದ್ದುಗೆಯನ್ನು ಎತ್ತಿ ಏಳುಕೋಟೆ ಏಳುಕೋಟ ಚಾಂಗ್‌ಭಲೋ ಚಾಂಗ್‌ಭಲೋ ಎಂದು ಕೂಗುತ್ತ ತಲೆಯ ಮೇಲೆ ಇಟ್ಟುಕೊಳ್ಳತ್ತಾರೆ. ಕೆಳಗೆಯಿಳಿಸಿದ ನಂತರ ಕೊಯ್ದಿಟ್ಟ ಕೊಬ್ಬರಿ ಚೂರುಗಳನ್ನು ಮೇಲಕ್ಕೆ ಏಸೆಯುತ್ತಾರೆ. ಈ ಚೂರುಗಳನ್ನು ಪ್ರಸಾದ ರೂಪದಲ್ಲಿ ಯಾರು ಬೇಕಾದರು ಆರಿಸಿಕೊಳ್ಳುವರು. ನಂತರ ಮಹಾಮಂಗಳಾರತಿ ಮುಗಿದ ನಂತರ ತೀರ್ಥ ಪ್ರಸಾದವನ್ನು ಸ್ವೀಕರಿಸಿ ಗೊರವಯ್ಯನವರಿಗೆ ನಮಸ್ಕರಿಸಿ, ಭಂಡಾರ ಧರಿಸುವ ಪದ್ಧತಿಯಿದೆ. ಮೈಲಾರನ ಆರಾಧಕ ಮನೆತನಗಳು ದಸರೆ ಹಬ್ಬದಲ್ಲಿ ಈ ಆಚರಣೆ ನಡೆಸುವರು.

**ಕಾಳಿಯ ಆಚರಣೆ:** ಈ ಆಚರಣೆಗೆ ಒಂದು ಹೊಸ ಬುಟ್ಟಿಯಲ್ಲಿ ಬೇವಿನ ತಪ್ಪಲನ್ನು ಹಾಕಿಕೊಂಡು ಅದರಲ್ಲಿ ಕಾಳಿ ಮಾತೆಯನ್ನು ಕೂರಿಸುವರು, ಆ ಪುಟ್ಟಿಯನ್ನು ಹಿರಿಯ ಮುತ್ತೈದೆ ಹೆಣ್ಣು ಹೊರುತ್ತಾಳೆ, ಆಕೆಯ ಮುಂಭಾಗದಲ್ಲಿ ಮತ್ತೊಬ್ಬ ಮಹಿಳೆಯು ಆರತಿ ತಟ್ಟೆ ಹಿಡಿದು ಸಾಗುತ್ತಾಳೆ, ಕುರಿ ಹಿಡಿದು ಕೊಂಡು ಹಲಗೆ ಬಾರಿಸುತ್ತ ಮೆರವಣಿಗೆ ಸಾಗುತ್ತದೆ, ಹೀಗೆ ಹೊರಟ ಮೆರವಣಿಗೆ ಊರ ಹೊರಗಡೆ ಒಂದು ತಾವರಿಕೆ ಗಿಡ(ತಂಗಡಿಗಿಡ) ಇರುವ ಜಾಗದಲ್ಲಿ ಬಂದು ಸೇರುವುದು, ಬುಟ್ಟಿ ಹೊತ್ತು ಕೊಂಡು ಬರುವ ಹೆಣ್ಣು ಮಗಳು ಮಡಿಯಿಂದ ಇದ್ದು ಉಪವಾಸ ಇರುತ್ತಾರೆ. ಆದರೆ ಈ ದೇವಿಗೆ ಮದ್ಯಪಾನ ತುಂಬಾ ಇಷ್ಟವಾದುದರಿಂದ ದಾರಿಯುದ್ದಕ್ಕೂ ಪದೇ ಪದೇ ಮದ್ಯಪಾನದ ಸೇವೆ ನಡೆಯುತ್ತಲೇ ಇರುತ್ತದೆ. ತಾವರಿಕೆ ಗಿಡದ ಸುತ್ತಮುತ್ತ ಚೊಕ್ಕಮಾಡಿ ಆ ಗಿಡದ ಬುಡದಲ್ಲಿ ಗೋಮಯದಿಂದ ಸಾರಿಸಿ ರಂಗೋಲೆ ಹಾಕಿ, ಐದು ಉದ್ದನೆಯ ಕಲ್ಲುಗಳನ್ನು ತಂದು ಸಾಲಾಗಿ ಜೋಡಿಸುವರು, ಅವುಗಳಿಗೆ ಅರಿಶಿನ, ಕುಂಕುಮಗಳಿಂದ ಅಲಂಕರಿಸಿ ಬೇವಿನ ಸೊಪ್ಪಿನಿಂದ ಅಲಂಕಾರ ಮಾಡಿ ಪೂಜೆ ಮಾಡುತ್ತಾರೆ. ಸಿಹಿ ಅಡುಗೆಯನ್ನು ಎಡೆ ಮಾಡುತ್ತಾರೆ. ನಂತರ ಬಲಿ ಕೊಡುವ ಕುರಿಯನ್ನು ದೇವರ ಮುಂದೆ ನಿಲ್ಲಿಸಿ ತಲೆಯ ಮೇಲೆ ಹಾಗೂ ಕಾಲುಗಳ ಮೇಲೆ ನೀರು ಹಾಕಿ ಅರಿಶಿನ ಕುಂಕುಮ ಹಚ್ಚಿ ಹೂಮಾಲೆ ಹಾಕಿ ಪೂಜೆ ಮಾಡುತ್ತಾರೆ.

ಕುರಿ ತಲೆ ಅಲ್ಲಾಡಿಸಿದರೆ ಮಾತ್ರ ಕೊಯ್ಯುತ್ತಾರೆ. ತಲೆ ಕೊಡುವದಿದ್ದರೆ ಅದನ್ನು ಕೊಯ್ಯುವಂತಿಲ್ಲ ಕುರಿ ತಲೆ ಅಲ್ಲಾಡಿಸದಿದ್ದರೆ ಆಚರಣೆಯಲ್ಲಿ ಏನೋ ತಪ್ಪು ನಡೆದಿದೆ ಎಂದು ತಿಳಿದುಕೊಳ್ಳಬೇಕು. ತಪ್ಪು ಮಾಡಿದವರು ತಾವು ಮಾಡಿದ ತಪ್ಪನ್ನು ಒಪ್ಪಿಕೊಂಡಾಗ ಮಾತ್ರ ಆ ಕುರಿ ತಲೆ ಕೊಡುವುತ್ತದೆ. ಆಗ ಕುರಿಯನ್ನು ಕಡಿದು ಅದರ ತಲೆಯನ್ನು ದೇವರ ಮುಂದೆ ಇಟ್ಟು ಬಿಡುತ್ತಾರೆ. ನಂತರ ಅಡಿಗೆಯನ್ನು ತಯಾರು ಮಾಡಿ ಸಂಜೆಯ ವೇಳೆಗೆ ಎಡೆ ಹಾಕುತ್ತಾರೆ. ಉಪವಾಸವಿದ್ದವರು ಎಡೆಯನ್ನು ಊಟ ಮಾಡಿದ ನಂತರ ಎಲ್ಲರೂ ಊಟ ಮಾಡುತ್ತಾರೆ. ಅಡಿಗೆ ಪೂರ್ಣ ಅಲ್ಲಿಯೇ ಖಾಲಿ ಮಾಡಬೇಕೇ ಹೊರೆತು ಮನಗೆ ತರುವಂತಿಲ್ಲ. ದೇವರನ್ನು ಹೊತ್ತವಳ ಮೇಲೆ ದೈವಾವೇಶವಾಗಿ ಒಳಿತು ಕೆಡಕುಗಳ ಕುರಿತು ತಿಳಿಸುವಳು.

'ಸಿಂಥೆ' ಮನೆತನದವರು ಇನ್ನೊಂದು ದೇವತೆಯ ಹೆಸರಿನಲ್ಲಿ ಪೂಜೆಯನ್ನು ಸಲ್ಲಿಸುತ್ತಿದ್ದರು. ಆ ದೇವತೆಯ ಹೆಸರು 'ಬೇಂಸೋಬ' ಎಂದು. ಇವರ ಮನೆತನದಲ್ಲಿ ಯಾವ ಮಗನಿಗೆ ಗಂಡು ಮಕ್ಕಳು ಹುಟ್ಟಿದರೂ ಆ ಮಕ್ಕಳ ತಲೆ ಕೂದಲನ್ನ ಈ ದೇವಿಯ ಹೆಸರಿನಲ್ಲಿ ಬಿಡುತ್ತಿದ್ದರು. ತಲೆಯ ಕೂದಲು ತಗೆಯುವ ಮೊದಲೇ ಎರಡು ಕುರಿಗಳನ್ನು ತರುತ್ತಿದ್ದರು. ಅದರಲ್ಲಿ ಒಂದು ಗರ್ಭ ಧರಸಿರುವ ಹೆಣ್ಣುಕುರಿ, ಈ ಕುರಿಯ ಹೊಟ್ಟೆಯಲ್ಲಿ ಮರಿ ಇರಲೇ ಬೇಕಿತ್ತು. ತಲೆ ಕೂದಲು ತಗೆಯುವ ದಿನಾಂಕ ಗೊತ್ತು ಪಡಿಸಿ ತಮ್ಮ ಬಂಧು, ಬಾಂಧವರೆಲ್ಲರನ್ನು ಕರೆಯಿಸಿ ಹೊರಬೀಡು ಹೋಗುತ್ತಿದ್ದರು. ಆ ಜಾಗದಲ್ಲಿ ಹರಿಯುವ ನೀರಿನ ಹಳ್ಳವಾಗಲೀ ನದಿಯಾಗಲಿ ಇರಲೇಬೇಕಿತ್ತು. ಅಂತಹ ಜಾಗವನ್ನು ನಿಗದಿ ಪಡಿಸಿ ಅಲ್ಲಿ ಡೇರೆ ಹಾಕುತ್ತಿದ್ದರು. (ಕಾಸಂದಿ ಝಾಡ್) ತಾವರಿಕೆಯ ಗಿಡದ ಬಳಿ ಚೊಕ್ಕಗೊಳಿಸಿ ಗೋಮಯದಿಂದ ನೆಲ ಸಾರಿಸಿ ರಂಗೋಲೆಯನ್ನು ಹಾಕಿ ಆ ಗಿಡದ ಬುಡದಲ್ಲಿ ೫ ಕಲ್ಲುಗಳನ್ನು ನಿಲ್ಲಿಸಿ ಅದಕ್ಕೆ ಬೇವಿನಿಂದ ಹಾಗೂ ಅರಿಶಿನ ಕುಂಕುಮದಿಂದ ಅಲಂಕರಿಸಿ ಹೂವುಗಳನ್ನು ಮುಡಿಸಿ ಭಕ್ತಿಯಿಂದ ಎಲ್ಲರೂ ಪೂಜೆ ಮಾಡುತ್ತಿದ್ದರು. ನಂತರ ದೇವಿಯ ಎರಡು ಪಕ್ಕದಲ್ಲೂ ಜೋಳದ ದಂಟುಗಳಿಂದ ಮಾಡಿದ 'ತಡಗ' (ತೆಪ್ಪ) (ಒಂದು ಅಡಿ ಅಗಲ ೧ ೧/೨ ಅಡಿ ಉದ್ದವಿರುವ) ಗಳನ್ನಿಟ್ಟು ಆ ತೆಪ್ಪಗಳ ಮೇಲೆ ಗೋದಿ ಹಿಟ್ಟಿನಿಂದ ಮಾಡಿದ ದೀಪಗಳನ್ನಿಟ್ಟು ಎಲೆ, ಅಡಿಕೆ, ನಾಣ್ಯ, ಅರಿಶಿನ ಕುಂಕುಮ, ಹಾಕಿ ದೀಪಗಳನ್ನು ಹಚ್ಚುತ್ತಿದ್ದರು ದೇವತೆಗೆ ಅನ್ನ, ಮೊಸರು, ಬೆಲ್ಲ ಸೇರಿಸಿ ಎಡೆ ಹಾಕುತ್ತಿದ್ದರು. ಪೂಜೆ ಎಲ್ಲರೂ ಮಾಡಿದ ನಂತರ ಮಂಗಳಾರತಿ ಮಾಡಿ ದೇವಿಯ ಹೆಸರಿನಲ್ಲಿ ಹಾಡುತ್ತಿದ್ದರು.

ಇದೆಲ್ಲ ಮುಗಿದ ಬಳಿಕ ಕುರಿಗಳೆರಡನ್ನು ದೇವಿಯ ಮುಂಭಾಗದಲ್ಲಿ ನಿಲ್ಲಿಸಿ ಮೈ ಮೇಲ್ಲೆಲ್ಲ ನೀರು ಸುರಿದು ಅರಿಶಿನ ಕುಂಕುಮ ಧರಿಸಿ ಪೂಜೆ ಸಲ್ಲಿಸುತ್ತಿದ್ದರು. ಅವು ತಲೆ ಕೊಡವಿದರೆ ದೇವಿ ಒಪ್ಪಿಗೆ ಕೊಟ್ಟಿರುವಳೆಂದು ತಿಳಿದು ಕುರಿಗಳನ್ನು ಕೊಯ್ದು ಅವುಗಳ ತಲೆಯನ್ನು ದೇವಿಯ ಮುಂದಿಟ್ಟು ತಲೆಯ ಮೇಲೆ ನೀರು ಹಾಕುತ್ತಿದ್ದರು.

ನೀರು ಹಾಕಿದ ನಂತರ ಆ ತಲೆಗಳು ಬಾಯಿ ಬಿಡುತ್ತಿದ್ದವು ಹೆಣ್ಣುಕುರಿಯ ಗರ್ಭವನ್ನು ಸೀಳಿ ಹೊಟ್ಟೆಯಲ್ಲಿರುವ ಮರಿಗಳನ್ನು ಹೊರತೆಗೆದು ತಡಗದ ಮೇಲೆ ಇಡುತ್ತಿದ್ದರು ನಂತರ ವಿಧಿವತ್ತಾಗಿ ಮಗುವಿನ ಸೋದರಮಾವನಿಂದ ತಲೆಕೂದಲುನ್ನು ಕತ್ತರಿಸಿ ಆ ಎರಡು ತಡಗದ ಮೇಲೆ ಇರಿಸುತ್ತಿದ್ದರು. ಈ ಆಚರಣೆಗೆ ಜವಳ ತೆಗೆಯುವದು ಎಂದು ಕರೆಯುವರು ಇತ್ತ ಕಡೆ ಗಂಡಸರಿಂದ ಇಸ್ಪಿಟ್ ಆಟಗಳು, ಹೆಂಡ-ಸರಾಯಿಗಳ ಮೋಜು ನಡೆಯುತ್ತಲೇ ಇರುತ್ತಿತ್ತು. ಹೆಣ್ಣು ಮಕ್ಕಳೆಲ್ಲ ಸೇರಿ ಅಡಿಗೆ ಮಾಡುತ್ತಿದ್ದರು. ಜೋಳದ ಅಥಾವ ಗೋದಿ ಹಿಟ್ಟಿನಿಂದ ರೊಟ್ಟಿಗಳನ್ನು ಮಾಡುತ್ತಿದ್ದರು. ಅಡಿಗೆಯಲ್ಲ ಮುಗಿದ ಬಳಿಕ ದೇವಿಗೆ ಎಡೆ ಹಾಕುತ್ತಿದ್ದರು. ಎಲ್ಲರೂ ಪೂಜೆ ಮಾಡುವಂತಹ ಸಂದರ್ಭದಲ್ಲಿ ದೇವಿ ಯಾರಲ್ಲಾದರೂ ಆಹ್ವಾನೆಗೊಂಡು ಮುಂದಿನ ಮಾರ್ಗದರ್ಶನ ಮಾಡುತ್ತಿತ್ತು ತಪ್ಪು ಮಾಡಿದವರಿಗೆ ಶಿಕ್ಷೆಯನ್ನು ಕೊಡುತ್ತಿತ್ತು ಎಂದು ಹಿರಿಯರು ತಿಳಿಸಿದ್ದಾರೆ. ದೇವಿ ಸಂತೃಪ್ತಿಯಾದ ನಂತರ ಎಡೆಯ ತಡಗಗಳೆರಡನ್ನು ಎತ್ತಿಕೊಂಡು ಹೋಗಿ ಗಂಗೆ ಪೂಜೆಯನ್ನು ಮಾಡಿ ಎಡೆಯನ್ನರ್ಪಿಸಿ ಎರಡು ತಡಗ (ತೆಪ್ಪ) ಗಳನ್ನು ನೀರಿನಲ್ಲಿ ಬಿಡುತ್ತಿದ್ದರು.ಇದನ್ನು ನೋಡಿ ಸಂತೋಷ ಪಟ್ಟು ಎಲ್ಲರೂ ಮರಳಿ ಬಂದು ಸಂತೋಷದಿಂದ ಕೂಡಿ ನಕ್ಕು ನಲಿಯುತ್ತ ,ಉಪವಾಸವಿದ್ದವರು ಮೊದಲು ಪ್ರಸಾದ ಸ್ವೀಕರಿಸಿದ ನಂತರ ಎಲ್ಲರು ಸಾಮೂಹಿಕ ಊಟ ಮಾಡುತ್ತಿದ್ದರು. ಸಂಜೆಯ ನಂತರ ದೇವಿಗೆ ಪೂಜೆ ಸಲ್ಲಿಸಿ ನೀರಿನಲ್ಲಿ ವಿಸರ್ಜನೆ ಮಾಡಿ ತಿರುಗಿ ಮನೆಗೆ ಬರುತ್ತಿದ್ದರು.

ಗೋಸಂಗಿಗಳು ತಮ್ಮ ಹೊಟ್ಟೆಯ ಪಾಡಿಗಾಗಿ ತಾವು ವಾಸ ಮಾಡುತ್ತಿದ್ದ ಬಿಡಾರ ವನ್ನು ಬಿಟ್ಟು ತಿಂಗಳು ಗಟ್ಟಲೆ ಬೇರೆ ಬೇರೆ ಸ್ಥಳಗಳಿಗೆ ವ್ಯಾಪರಕ್ಕಾಗಿ ಹೋಗು ತ್ತಿದ್ದರು.ಇವರು ಎಲ್ಲಿಗೇ ಹೋಗಿದ್ದರು. ದೀಪಾವಳಿ ಮತ್ತು ಹೋಳಿ ಹಬ್ಬಗಳಿಗೆ ತಮ್ಮ ಗುಡಾರಗಳಿಗೆ ಮರಳಿ ಬರುತ್ತಿದ್ದರು. ಕಾರಣ ಈ ಎರಡು ಹಬ್ಬಗಳು ಮುಖ್ಯವಾಗಿ ಅವರ ಸಮುದಾಯದ ಹಬ್ಬಗಳಾಗಿದ್ದವು ಈ ಹಬ್ಬಗಳನ್ನು ಆಚರಿಸುವ ಮೊದಲು ಜಾತಿಗೆ ಸಂಬಂಧ ಪಟ್ಟ ಏನೇ ನ್ಯೂನತೆಗಳಿದ್ದರು ಸಮಾಜದವರೆಲ್ಲ ಸೇರಿ ಸರಿಪಡಿಸಿ ಕೊಳ್ಳಬೇಕಿತ್ತು. ಕೆಲವು ಸಂದರ್ಭದಲ್ಲಿ ದಂಡ ಹಾಕುವ, ಬಹಿಷ್ಕಾರ ಹಾಕುವ ಸಂದರ್ಭ ಗಳೂ ಬರುತ್ತಿದ್ದವು. ಹಾಗೇನಾದರೂ ಆದರೆ ಅಂಥಹವರಿಗೆ ಜಾತಿಯಿಂದ ಹೊರಗಿಡು ತ್ತಿದ್ದರು. ಹಬ್ಬದ ಆಚರಣೆಗಳಿಗೆ ಅಂಥಹವರನ್ನು ಸೇರಿಸಿಕೊಳ್ಳುತ್ತಿರಲಿಲ್ಲ.

ದೀಪಾವಳಿ ಹಬ್ಬ : ಅಮವಾಸ್ಯೆಯಿಂದ ಪ್ರಾರಂಭವಾಗುತ್ತಿತ್ತು. ಅಮವಾಸ್ಯೆಯ ದಿನ ರಾತ್ರಿ ೮ ಗಂಟೆಯ ನಂತರ 'ಪಂಜು' ಹಿಡಿಯುವ ಕಾರ್ಯಕ್ರಮ ಪಂಜು ಎಂದರೆ ಜೋಳದ ದಂಟನ್ನು ತಂದು ಮೂರು ಅಡಿ ಉದ್ದ ಇರುವಂತೆ ಕತ್ತರಿಸಿ ಅದರ ಮೇಲಿರುವ ಸಿಪ್ಪೆಯನ್ನು ತಗೆದು ತುದಿಯ ಭಾಗದಲ್ಲಿ ೪ ಹೋಳು ಬರುವಂತೆ ಸಿಗಿಯುತ್ತಿದ್ದರು. ಬಿಳಿ ಬಟ್ಟೆಯಿಂದ ಬತ್ತಿಗಳನ್ನು ತಯಾರಿಸಿ ಎಣ್ಣೆಯಲ್ಲಿ ನೆನಸಿ ಆ ಬತ್ತಿಗಳು ೪ ಹೋಳು ಮಾಡಿದ ಜಾಗದಲ್ಲಿ ಸಿಕ್ಕಿಸಿ ಕೆಂಪು ಮಣ್ಣು ಹಚ್ಚಿದ ಬಟ್ಟೆಯಿಂದ

ಆ ಬತ್ತಿಗಳು ಬೀಳದ ಹಾಗೆ ದಂಟಿನ ಸುತ್ತಲೂ ಸುತ್ತವರು ಗೌಡರ ಮನೆತನದಲ್ಲಿ ೧೦ ದಂಟುಗಳು ರೈತರ ಮನೆಗಳಲ್ಲಿ ೫ ದಂಟುಗಳಂತೆ ಮಾಡಿ ದೇವರ ಮನೆಯಲ್ಲಿ ಎಣ್ಣೆ ಹಾಕಿಟ್ಟ ಬಟ್ಟಲಿನಲ್ಲಿ ಬತ್ತಿಗಳು ನೆನೆಯುವಂತೆ ಗೋಡೆಗೆ ಒರಗಿಸಿ ಇಡುತ್ತಿದ್ದರು. ಗೌಡರು ಹೇಳಿದ ಸಮಯಕ್ಕೆ ಸರಿಯಾಗಿ ದೀವಟಿಕೆಗಳನ್ನು (ಪಂಜುಗಳು) ದೀಪಕ್ಕೆ ಹಿಡಿದು ಉರಿಯುವಂತೆ ಮಾಡಿಕೊಂಡು ತಮ್ಮ ಬಿಡಾರಗಳಲ್ಲಿ ಆಗಲಿ, ದನಕರುಗಳಿರುವ ಜಾಗದಲ್ಲಿ ತಮ್ಮವರನ್ನೆಲ್ಲ ಒಂದು ಕಡೆ ಕೂರಿಸಿ ಹತ್ತಿಸಿರುವ ಪಂಜನ್ನು ಹಿಡಿದುಕೊಂಡು ಗುಡಾರದೊಳಗೆ ಹೊರಗೆ ದನಕರುಗಳ ಮೇಲೆ ಮನೆಯವರೆಲ್ಲರ ಮೇಲೆ "ಅಡಾಪೀಡಾಜಾಂದೆ ಬಲಚಾರ್ ಆಂದೆ" ಎಂದು ಜೋರಾಗಿ ಹೇಳುತ್ತ ಎಲ್ಲಾ ಕಡೆಗೂ ಪಂಜನಿಂದ ಬೆಳಗುತ್ತಿದ್ದರು. ನಂತರ ಮನೆಯ ಒಳಗೂ ಹೊರಗೂ ಇರುವ ದುಷ್ಟ ಶಕ್ತಿಗಳೆಲ್ಲ ತೊಲಗಲಿ ಹಾಗೂ ಎಲ್ಲರ ಮನಸ್ಸಿನೊಳಗಿನ ಕತ್ತಲೆ ಹರಿದು ಬೆಳಕು ಮೂಡಲಿ ಎಂದು ಪಂಜು ಬೆಳಗುತ್ತಿದ್ದರು. ಮೊದಲು ಗೌಡರ ಮನೆಯ ಬಾಗಿಲಿಗೆ ಎಲ್ಲರೂ ಬಂದು (ತೇಲ್‌ದಾಳೋ ತೇಲ್ ಹಂಡಿಸರ್‍ಕೋಪೇಟ್) ಎಂದು ಕೂಗುತ್ತಿದ್ದರು ಆಗ ಮನೆಯವರೆಲ್ಲ ಹೊರಕ್ಕೆ ಬಂದು ಆ ಪಂಜುಗಳನ್ನು ನೋಡಿ ಸಂತೋಷ ಪಡುತ್ತಿದ್ದರು. ಹೆಣ್ಣು ಮಕ್ಕಳು ಪಂಜು ಹಿಡಿದವರೆಲ್ಲರ ಕಾಲಿಗೆ ನೀರು ಹಾಕಿ ಆರತಿ ಮಾಡಿ ಎಲ್ಲಾ ಪಂಜುಗಳಿಗೂ ಎಣ್ಣೆಯನ್ನು ಹಾಕುತ್ತಿದ್ದರು. ಆಗ ಪಂಜು ಹಿಡಿದವರೆಲ್ಲ ಈ ಮೇಲೆ ಹೇಳಿದಂತೆ ಗಟ್ಟಿಯಾಗಿ ಕೂಗುತ್ತ ಕುಣಿಯುತ್ತ ಮುಂದಿನ ಮನೆಗೆ ಹೋಗುತ್ತಿದ್ದರು. ಹೀಗೆ ಆ ಪ್ರದೇಶದಲ್ಲಿದ್ದ ಎಲ್ಲರ ಮನೆಗಳಲ್ಲೂ ಎಣ್ಣೆ ಹಾಕಿಸಿಕೊಂಡ ನಂತರ ಆ ಪಂಜುಗಳನ್ನು ಊರ ಹೊರಗೆ ತಿಪ್ಪೆಯಲ್ಲಿ ಸಿಕ್ಕಿಸಿ ತಿರುಗಿ ನೋಡದಂತೆ ಬಿಡಾರಗಳಿಗೆ ಬರುತ್ತಿದ್ದರು. ಏಕೆ ಹಿಂತಿರುಗಿ ನೋಡುತ್ತಿರಲಿಲ್ಲ ವೆಂದರೆ ಹೊರಗೆ ಹೋದ ಅನಿಷ್ಟ ದರಿದ್ರ ಪುನಃ ವಾಪಾಸ್ಸು ಬರಬಾರದೆಂದು ಹಿಂತಿರುಗಿ ನೋಡುತ್ತಿರಲಿಲ್ಲ. ಪಂಜುಗಳನ್ನು ತಿಪ್ಪೆಯಲ್ಲಿ ಸಿಕ್ಕಿಸಿ ಮನೆಗೆ ಬಂದ ಗಂಡಸರನ್ನು ಹೊರಗೆ ನಿಲ್ಲಿಸಿ ಅವರ ಕಾಲಿಗೆ ಹೆಣ್ಣು ಮಕ್ಕಳು ನೀರನ್ನು ಹಾಕಿ ಮೈಮೇಲೆ ನೀರನ್ನು ಸಿಂಪಡಿಸಿ ಒಳಗೆ ಕರೆದುಕೊಳ್ಳುತ್ತಿದ್ದರು. ಆಗ ಮನೆಯ ಯಜಮಾನಿ ಒಂದು ಕೊಬ್ಬರಿ ಬಟ್ಟಲನ್ನು ತೆಗೆದುಕೊಂಡು ಅದರಲ್ಲಿ ಎಣ್ಣೆ ಹಾಕಿ ಹತ್ತಿಯಿಂದ ಮಾಡಿದ ಬತ್ತಿಯನ್ನಿಟ್ಟು ದೀಪ ಹಚ್ಚಿ ಹೊರಗಡೆ ಬಾಗಿಲ ಪಕ್ಕದಲ್ಲಿ ಒಂದು ಮೊರವನ್ನು ನಿಲ್ಲಿಸಿ ಅದರ ಮೇಲೆ ಹಚ್ಚಿದ ದೀಪವನ್ನು ಇರಿಸುತ್ತಾಳೆ. ಹೀಗೆ ತುಳಸಿಗಿಡ, ಕೊಟ್ಟಿಗೆ, ಬೀಸುವ ಕಲ್ಲು, ಒಳಕಲ್ಲು, ಮನೆಯ ಮುಂಭಾಗ, ದೇವರ ಜಗಲಿಯ ಮೇಲೆ ಇತ್ಯಾದಿ ಸ್ಥಳಗಳಲ್ಲಿ ದೀಪವನ್ನು ಹಚ್ಚಿ ಇರಿಸಿ ಮನೆಯನ್ನು ಅಲಂಕರಿಸಿ ಹಬ್ಬವನ್ನು ಆಚರಿಸುತ್ತಾರೆ. ಇದರೊಂದಿಗೆ ಅಂದು ಮಕ್ಕಳು ಬಾಣಬಿರುಸುಗಳನ್ನು ಸಿಡಿಸಿ ಸಂತೋಷ ಪಡುತ್ತಾರೆ.

ಬೆಳಗಿನ ಜಾವದಲ್ಲಿ ಮನೆಯ ಯಜಮಾನಿ ಬೇಗನೆದ್ದು ರಾತ್ರಿಯಿಟ್ಟ ಮೊರವನ್ನು ಎಡಗೈಯಲ್ಲಿ ಹಿಡಿದು ಬಲಗೈಯಲ್ಲಿ ಚುಂಚಕ ಹಿಡಿದು ಅದರ ಮೇಲೆ ಕೊಬ್ಬರಿ

ದೀಪ ಹಚ್ಚಿಟ್ಟು ಮೊರವನ್ನು ಬಡೆಯುತ್ತ ಮನೆಯೊಳಗೆಲ್ಲ ಆಡಾಪೀಡಾ ಜಾಂದೆ ಬಲಾಚಾರ್ ಆಂದೆ ಎಂದು ಹೇಳುತ್ತಾ ಹೊರಬಾಗಿಲಿಗೆ ಬಂದು ಮೊರವನ್ನು ಹಿಂದಿನ ದಿನಯಿಟ್ಟ ಜಾಗದಲ್ಲಿ ಇಡುತ್ತಾರೆ. ಹೀಗೆ ಐದು ದಿನಗಳವರೆಗೆ ಮಾಡುತ್ತಾ ಐದನೇ ದಿನ ಕೊಬ್ಬರಿ ಬಟ್ಟಲು ಪೂರ್ಣವಾಗಿ ಸುಟ್ಟು ಹೋಗುವ ತನಕ ಬಿಡುತ್ತಾರೆ. ಈ ಹಬ್ಬದ ಆಚರಣೆಯಲ್ಲಿ ಒಬ್ಬೊಬ್ಬರು ಕೆಟ್ಟ ಭಾಷೆಗಳಲ್ಲಿ ಬೈದು ಕೊಳ್ಳುತ್ತಿದ್ದರು. ಈ ಬೈಗಳಿಂದ ಯಾರು ಬೇಸರ ಪಡುತ್ತಿರಲಿಲ್ಲ. ರಾತ್ರಿ ಕಾಲದಲ್ಲಿ ಕಳ್ಳತನ ಮಾಡುವ ಪದ್ಧತಿಯೂಯಿತ್ತು. ಕದ್ದದ್ದೂ ಗೊತ್ತಿದ್ದರೂ ಸಹ ಯಾರು ಜಗಳ ಮಾಡುತ್ತಿರಲಿಲ್ಲ. ಅಂದೇ ರಾತ್ರಿ ಹಂಡೆ, ಹರಿವಾಣಗಳಿಗೆ ಕೆಮ್ಮಣ್ಣು ಪಟ್ಟೆ ಹಚ್ಚಿ ಬಾವಿ ನೀರನ್ನು ತುಂಬಿ ಮಹಾಲಿಂಗದ ಬಳ್ಳಿಯನ್ನು ಹರವಿಯ ಕಂಠಕ್ಕೆ ಸುತ್ತುತ್ತಾರೆ. ಈ ಹಬ್ಬದ ಆಚರಣೆ ಮಾಡುವಾಗ ಹೆಣ್ಣು ಮಕ್ಕಳು ದೀಪ ಹಚ್ಚುವಾಗ ಬಾಗಿಲು ತೆಗೆಯುವಾಗ ಹಾಡುಗಳನ್ನು ಹೇಳುತ್ತಿದ್ದರು.

ಹಬ್ಬದ ಎರಡನೇಯ ದಿನ ಬಲಿ ಪಾಡ್ಯಮಿ ಊರಿನವರಿಗೆಲ್ಲ ಇದು ಪಾಡ್ಯದ ದಿನ ಹೊಲಗದ್ದೆಯಿದ್ದವರು ಪೈರನ್ನು ಮನೆಗೆ ತಂದು ಪೂಜಿಸುತ್ತಾರೆ. ಪೈರನ್ನು ಊರಿನ ದೇವರಿಗೆಲ್ಲ ಕೊಡುತ್ತಾರೆ. ಆದರೆ ಗೋಸಂಗಿಯವರಿಗೆ ಹೊಲಗದ್ದೆಗಳಿರುವುದಿಲ್ಲ ಆದ್ದರಿಂದ ಇವರು ಬೇರೆಯವರ ಹೊಲಗದ್ದೆಗಳಿಗೆ ಹೋಗಿ ರಾಗಿತೆನೆ ಜೋಳದತೆನೆ ಬತ್ತದತೆನೆ ಮೆಣಸಿನ ಕಾಯಿ ತಂಗಡಿಕೆ ಹೂವು, ಚಂಡಿನ ಹೂವು, ಉತ್ತರಾಣಿಕಡ್ಡಿ, ಅನ್ನೆಸೊಪ್ಪಿನ ಹೂವು, ಇವುಗಳನ್ನು ತರುತ್ತಿದ್ದರು.

ಕೊಟ್ಟಿಗೆಯಲ್ಲಿರುವ ಸಗಣೆಯನ್ನು ತಂದು ದುಂಡುಗೆ ಉಂಡೆಗಳನ್ನು ಮಾಡಿ ಆ ಉಂಡೆಗಳಲ್ಲಿ ದಾನ್ಯಗಳ ತೆನೆಗಳನ್ನು, ಹೂವುಗಳನ್ನು, ಮೆಣಸಿನಕಾಯಿನ್ನು, ಸಿಕ್ಕಿಸಿ ಆ ಉಂಡೆಗಳನ್ನು ಎತ್ತಿಕೊಂಡು ಹೋಗಿ ಮನೆಯ ಮುಂದುಗಡೆ ಬಾಗಿಲುಗಳ ಮುಂದೆ ಬೀಸುವಕಲ್ಲು, ಬಳಕಲ್ಲು ದುಂಡಿ, ಒಲೆ, ದೇವರ ಮನೆ ಪಣತ ಇನ್ನೂ ಅನೇಕ ಕಡೆಯಿಟ್ಟು ಆ ಉಂಡೆಗಳ ಸುತ್ತಲೂ ಸುಣ್ಣ ಮತ್ತು ಕೆಂಪು ಮಣ್ಣಿನಿಂದ ಸುತ್ತಲೂ ಪಟ್ಟಿ ಹಾಕುತ್ತಿದ್ದರು. ಇದಕ್ಕೆ ಹಟ್ಟಿಯಿಡುವುದು ಎಂದು ಕರೆಯುತ್ತಾರೆ. ಮನೆಯವರೆಲ್ಲ ಮೈಗೆ ಎಣ್ಣೆ ಹಚ್ಚಿಕೊಂಡು ಎಣ್ಣೆನೀರಿನ ಸ್ನಾನ ಮಾಡುತ್ತಾರೆ.

ಸ್ನಾನ ಮಾಡುವಾಗ ಉತ್ತರಾಣಿಕಡ್ಡಿಯನ್ನು ತಲೆಯ ಮೇಲೆ ಹೆಗಲುಗಳ ಮೇಲೆ ಇಟ್ಟುಕೊಂಡು ಸ್ನಾನ ಮಾಡುತ್ತಾರೆ. ಇದಕ್ಕೆ ಗದಡಾ ಉತಾರೋಂಡೊ ಎಂದು ಕರೆಯುತ್ತಾರೆ. ಏಕೆ ಹೀಗೆ ಮಾಡುತ್ತಾರೆಂಬ ಮಾಹಿತಿಯಾರಿಂದಲೂ ತಿಳಿದು ಬಂದಿಲ್ಲ. ಈ ಕಾರ್ಯ ನಡೆಯುವಂತಹ ಸಂದರ್ಭದಲ್ಲಿ ಆ ಗುಂಪಿನಲ್ಲಿ ಯಾರೇ ಆಗಲಿ ಜಾತಿಯಿಂದ ಹೊರಗೆಯಿದ್ದರೆ ಅಂಥವರು ಎಲ್ಲರ ಜೊತೆ ಪಂಜು ಹಿಡಿದು ಬರುವಂತಿರಲಿಲ್ಲ ಹಾಗೂ ಪಂಜು ಹಿಡಿದವರಾರೂ ಅವರ ಮನೆಗೆ ಹೋಗುವಂತಿರಲಿಲ್ಲ ಅಂಥವರನ್ನ ಸಮಾಜದಿಂದ ದೂರ ಇಡಲಾಗುತ್ತಿತ್ತು.

**ಹೋಳಿಹಬ್ಬ (ಕಾಮದಹನ) :** ಹೋಳಿ ಹಬ್ಬವೂ ಕೂಡ ಈ ಜನಾಂಗಕ್ಕೆ

ಅತಿಮುಖ್ಯವಾದ ಹಬ್ಬ. ಈ ಹಬ್ಬವನ್ನು ಪ್ರತಿವರ್ಷ ಹೋಳಿ ಹಬ್ಬದ ಹುಣ್ಣಿಮೆಯಂದು ಆಚರಿಸುತ್ತಾರೆ. ಕಾಮದಹನ ಮಾಡಲು ತಮ್ಮ ಪರಿಸರದಿಂದ ಸ್ವಲ್ಪ ದೂರದಲ್ಲಿ ಒಂದು ಸ್ಥಳವನ್ನು ನಿಗದಿ ಪಡಿಸಿಕೊಂಡಿರುತ್ತಾರೆ. ಭಾರತ ಹುಣ್ಣಿಮೆಯ ದಿನ ಪ್ರತಿವರ್ಷ ಕಾಮನ ಸುಡುವ ಜಾಗಕ್ಕೆ ಹೋಗಿ ಆ ಜಾಗಕ್ಕೆ ಪೂಜೆಸಲ್ಲಿಸಿ ೫ ಕುಳ್ಳು (ಬೆರಣಿ) ಗಳನ್ನು ಆ ಜಾಗದಲ್ಲಿಟ್ಟು ಪೂಜೆಮಾಡಿಕೊಂಡು ಬರುತ್ತಾರೆ. ಇದಕ್ಕೆ "ಮಾದೇವ್" ಪೂಜೆಯೆಂದು ಕರೆಯುತ್ತಾರೆ.

ಕಾಮದಹನ ಹುಣ್ಣಿಮೆಯಂದು ಗಂಡು ಮಕ್ಕಳೆಲ್ಲ ಸಂಜೆ ಕೂಡಿಕೊಂಡು ಊರಿನಲೆಲ್ಲಾ ತಿರುಗಿ ಬಾಯಿ ಬಡೆದುಕೊಳ್ಳುತ್ತ ಕಟ್ಟಿಗೆಯನ್ನು ತಂದು ಕುಳ್ಳಿಟ್ಟ ಜಾಗದಲ್ಲಿ ಹಾಕುತ್ತಾರೆ. ಬಳಗದವರೆಲ್ಲರೂ ಸೇರಿದ ನಂತರ ಬಳಗದ ಕಟ್ಟೆಗೌಡರು ಬರುತ್ತಾರೆ. ಅವರು ಕುಳ್ಳುಯಿಟ್ಟ ಜಾಗದಲ್ಲಿ ನೀರು ಗೋಮೂತ್ರವನ್ನು ಹಾಕಿ ಶುದ್ಧೀಮಾಡಿಕೊಂಡು ಆ ಜಾಗದಲ್ಲಿ ಸಣ್ಣ ಕುಣಿ ತೆಗೆದು ಅದರಲ್ಲಿ ಬಂಗಾರದ ಚೂರಾಗಲಿ ಅಥವಾ ನಾಣ್ಯವಾಗಲಿ ಅಕ್ಷತೆಯೊಂದಿಗೆ ಕುಣಿಯಲ್ಲಿಟ್ಟು ಮುಚ್ಚುತ್ತಾರೆ. ಅನುಭವಯಿದ್ದವರು ತಂದ ಸೌದೆಯನ್ನು ಗೂಡಿನಂತೆ ಜೋಡಿಸುತ್ತಾರೆ. ನಂತರ ಪೂಜಾ ಸಾಮಗ್ರಿಗಳನ್ನು ತಂದು ಗೂಡಿನಂತೆಯಿರುವ ಸೌದೆಗೆ ನೀರು ಸಿಂಪಡಿಸಿ ಹೂವುಗಳ ಮಾಲೆಯನ್ನು ಹಾಕಿ ಹಣ್ಣು ಕಾಯಿಗಳನ್ನೊಡೆದು ಪೂಜೆ ಮಾಡುತ್ತಾರೆ. ಈ ಸಂದರ್ಭದಲ್ಲಿ ಮುಂಚಿತವಾಗಿಯೇ ತಂದಿಟ್ಟ ೨ ಹರಳು ಗಿಡಗಳನ್ನು ಮದುವೆ ಆಗದ ಇಬ್ಬರು ಹುಡುಗರ ಕೈಯಲ್ಲಿ ಹಿಡಿಸಿ ಮೊದಲು ಗೌಡರ ಮನೆ ಬಾಗಿಲಿಗೆ ಹೋಗುತ್ತಾರೆ: ಮನೆ ಬಳಿ ದಾಂಡ ಹಿಡಿದುಕೊಂಡು ಬಂದವರ ಕಾಲಿಗೆ ನೀರು ಹಾಕಿ ಅವರ ಹಣೆಗೆ ಕುಂಕುಮ ಇಟ್ಟು ಕೈಯಲ್ಲಿ ಹಿಡಿದಿರುವ ದಾಂಡಾಗಳಿಗೆ ಕೊಬ್ಬರಿ ಬಟ್ಟಲು ಹೋಳಿಗೆ ಇವುಗಳನ್ನು ಕಟ್ಟಿ ಪೂಜಿಸುತ್ತಾರೆ.

ಗೋಸಂಗಿ ಸಮುದಾಯವು ಹೋಳಿ ಹಬ್ಬವನ್ನು ತುಂಬ ವೈಶಿಷ್ಟ್ಯ ಪೂರ್ಣದಿಂದ ಆಚರಿಸುತ್ತಿದ್ದು. ಒಂದು ಕಾಲದಲ್ಲಿ 'ರಘು' ಎಂಬ ಧರ್ಮಾತ್ಮನಾದ ರಾಜನಿದ್ದ ಹೀಗಿರುವಾಗ ಊರಲ್ಲಿ 'ಹೋಲಿಕಾ' (ಡೊಂಡಾ, ಡೊಂಡಾ) ಎಂಬ ರಾಕ್ಷಸಿ ಪ್ರವೇಶಿಸಿ ಪ್ರಜೆಗಳಿಗೆ ತುಂಬಾ ತೊಂದರೆ ಕೊಡುತ್ತಿದ್ದಳು ಹೋಲಿಕಾ ರಾಕ್ಷಸಿ ಮುಖ್ಯವಾಗಿ ಮಕ್ಕಳನ್ನು ಹೊತ್ತೋಯ್ದು ತಿನ್ನುತ್ತಿದ್ದಳು. ಹೀಗಿರುವಾಗ ಗ್ರಾಮಸ್ಥರೆಲ್ಲಾ ಭಯಭೀತರಾಗಿ ಮಕ್ಕಳು ಮರಿಯೊಂದಿಗೆ ಜೀವನ ಸಾಗಿಸುವುದೇ ದೊಡ್ಡ ತಲೆನೋವಾಗಿ ಪರಿಣಮಿಸಿತ್ತು ರಾತ್ರಿಯಾಯಿತೆಂದರೆ ಸಾಕು ಮಕ್ಕಳಾದಿಯಾಗಿ ನಿದ್ರೆ ಆಹಾರ ಬಿಟ್ಟು ಇಂದು ಯಾರ ಮನೆಯ ಮಕ್ಕಳನ್ನು "ಹೋಲಿಕಾ" ರಾಕ್ಷಸಿ ಹೊತ್ತೊಯ್ಯುವಳೆಂಬ ಆತಂಕದಿಂದ ದಿನದೂಡುತ್ತಿರುವಾಗ ಊರ ಮುಖ್ಯಸ್ಥರೆಲ್ಲಾ ಸೇರಿ ದಿನಕೊಬ್ಬರಂತೆ ಒಂದೊಂದು ಮನೆಯ ಮಗುವನ್ನು ರಾಕ್ಷಸಿಗೆ ನೀಡುವುದೆಂದು ಒಮ್ಮತದಿಂದ ತೀರ್ಮಾನಿಸಿ ರಾಕ್ಷಸಿಗೆ ತಿಳಿಸಿ ಅಂದಿನಿಂದ ಸ್ವತಃ ಇವರೇ ಮಕ್ಕಳನ್ನು ಕರೆದುಕೊಂಡು ಹೋಗಿ ರಾಕ್ಷಸಿಗೆ 'ಬಲಿ' ಕೊಟ್ಟು ಬರುತ್ತಿದ್ದರು. ತಿಂಗಳ ಕೊನೆಯ ಸರದಿ ಒಂದು ಅಜ್ಜಿಯ ಮನೆಯ

ದಾಗಿತ್ತು ಅಜ್ಜಿಗಿರುವ ಒಬ್ಬನೇ ಮೊಮ್ಮಗನನ್ನು ರಾಕ್ಷಸಿಗೆ ಬಲಿಕೊಡುವುದು 'ಸುತರಾಂ' ಇಷ್ಟವಿರಲಿಲ್ಲ. ಆವಾಗ ಗ್ರಾಮಸ್ಥರೆಲ್ಲರೂ ಸೇರಿ ರಾಜನಲ್ಲಿ ತಮ್ಮ ತಮ್ಮ ಕಷ್ಟಗಳನ್ನು ತೋಡಿಕೊಂಡರು ಅದನ್ನು ಆಲಿಸಿದ ರಾಜ ದಿಗ್ಭ್ರಮೆಗೊಂಡು ಮಹಾಮುನಿಗಳಾದ ಪೂಜ್ಯ 'ವಸಿಷ್ಠ' ರಿಗೆ ತಿಳಿಸಲು ಪರಿಹಾರಕ್ಕಾಗಿ ವಿನಂತಿಸಿಕೊಂಡಾಗ ಆವಾಗ ಮಹರ್ಷಿಗಳು 'ಹೋಲಿಕಾ' ರಾಕ್ಷಸಿಯ ಕುರಿತು ಈ ರೀತಿ ಹೇಳಿದರು ಈ 'ಹೋಲಿಕಾ' ರಾಕ್ಷಸಿ 'ಮಾಲಿ' ಎಂಬ ರಾಕ್ಷಸನ ಮಗಳಾಗಿದ್ದು ಶಿವನ ಕುರಿತು ಘನಘೋರ ವರ ಪಡೆದಿದ್ದು ಏನೆಂದರೆ ಮನಜುರಿಂದಾಗಲಿ, ರಾಕ್ಷಸರಿಂದಾಗಲಿ, ದೇವಾನು ದೇವತೆ ಗಳಿಂದಾಗಲಿ, ಶೀತೋಷ್ಣವರ್ಷಗಳಿಂದಾಗಲಿ, ಹಗಲಿರುಳಿಂದ, ಒಳ ಹೊರಗೆ ಯಾವ ರೂಪದಲ್ಲೂ ಸಾವು ಸಂಭವಿಸಬಾರದೆಂಬಂತೆ ಶಿವನಿಂದ ವರಪಡೆದಿರುವಳು, ಆದರೆ ಪರಶಿವನು ದುಷ್ಟಶಕ್ತಿ ರಾಕ್ಷಸಿಯ ನೀಚತನವನ್ನರಿತು ಎಚ್ಚರಿಕೆ ನೀಡಿಯೇ 'ವರ' ನೀಡಿರುವನೆಂದು ತಿಳಿಸಿದರು ಎಚ್ಚರಿಕೆ ಏನೆಂದರೆ "ಋತು ಸಂಧಿಕಾಲದಲ್ಲಿ ಉನ್ಮತ್ತದಿಂದ ಕೂಡಿದ ಮಕ್ಕಳಿಂದ ಕೆಡುಕಿದೆ" ಎಂದು ತಿಳಿಸಿ 'ವರ' ನೀಡುರಿವುದಾಗಿ ತಿಳಿಸಿದರು. ಆ ಕಾರಣದಿಂದಲೇ 'ರಾಕ್ಷಸಿ' ಅಡಡಾ, ಅಡಡಾ, ಎಂದು ಕೇಕೆ ಹಾಕುತ್ತಾ ಮಕ್ಕಳನ್ನು ಪೀಡಿಸುತ್ತಿರುವಳು ಅವಳ ಸಂಹಾರವಾಗಲೇ ಬೇಕಾದರೆ "ಪಾಲ್ಗುಣ ಶುದ್ಧ ಹುಣ್ಣಿಮೆ" ದಿನ ಪ್ರಜೆಗಳು, ಮಕ್ಕಳು ನೀವೆಲ್ಲಾ ಸೇರಿ ನಿರ್ಭೀತರಾಗಿ, ದೃಡಮನಸ್ಸಿನಿಂದ, ಉಲ್ಲಾಸ ಹುರುಪಿನಿಂದ ಮಕ್ಕಳ ಕೈಯಲ್ಲಿ ಖಡ್ಗ, ಕತ್ತಿ, ಈಟಿ, ಬರ್ಚಿಗಳೆಂಬ ಆಯುಧದೊಂದಿಗೆ ಮೆರೆಯಬೇಕು. ಜೊತೆಗೆ ಒಣಕಟ್ಟಿಗೆ, ಸಗಣಿವುಂಡೆ, (ಹಿಂದಿನ ಕಾಡುಕುಳ್ಳು ಈಗಿನ ಬೆರಣಿ) ರಾಶಿ ಹಾಕಿ ಬೆಂಕಿ ಹಚ್ಚಿ ಆ ಬೆಂಕಿಯ ಮುಂದೆ ಅಶ್ಲೀಲ ಪದಗಳಿಂದ ಅಂದರೆ ಯೋನಿ, ನಿಂತಂಭ, ಪಿರ್ರೆಗಳನ್ನು ಬಳಸಿ ಬೈಯ್ದು, ಹಾಡುಹಾಡಿ ಕುಣಿಯುತ್ತಾ, ಲಭೋ, ಲಭೋ ಎಂಬಂತೆ ಬಾಯಿಬಡಿದುಕೊಳ್ಳುತ್ತಾ ಕುಣಿದರೆ ಇದರಿಂದ ರಾಕ್ಷಸಿ ಭಯ ಬೀತಳಾಗಿ ಕ್ಷೀಣಿಸುವಳು ಎಂದು "ವಸಿಷ್ಠ" ಮಹರ್ಷಿಗಳು ತಿಳಿಸಲು ಅವರ ಆದೇಶದಂತೆ ಮಕ್ಕಳು, ಮರಿಯಾದಿಯಾಗಿ "ಪಾಲ್ಗುಣ ಶುದ್ಧ ಹುಣ್ಣಿಮೆ" ಗ್ರಾಮಸ್ಥರೆಲ್ಲಾ ಸೇರಿ ಈ ಮೇಲೆ ತಿಳಿಸಿದಂತೆ ಮಾಡಿದಾಗ 'ಹೋಲಿಕಾ' ಎಂಬ ರಾಕ್ಷಸಿ ಸತ್ತು ಹೋಗುವಳು ಅಂದನಿಂದ ಆಕೆಗೆ 'ಅಡಾಡಾ, ಅಡಾಡಾ', ಎಂದು ಹೆಸರಾಯಿತು, ದುಷ್ಟಶಕ್ತಿಗಳನ್ನು ನಾಶಮಾಡುವ ಈ 'ಸರ್ವರೋಗೋಪಹಾರಕವಾದ' ಆ ಹೋಮಕ್ಕೆ "ಹೋಲಿಕಾ ಹೋಮ" ಎಂಬ ಹೆಸರು ಬಂದಿರುತ್ತದೆ. ಇಂದಿಗೂ ಗೋಸಂಗಿಯ ಹಿರಿಯರು ರಾತ್ರಿ ಮಕ್ಕಳಿಗೆ ಈ "ಹೋಲಿಕಾ" ಮಕ್ಕಳನ್ನು ತಿನ್ನುವ ಕಥೆ ಹೇಳುವುದು ಜಾರಿಯಲ್ಲಿದೆ.

ಗೋಸಂಗಿಗಳು ಇಂದಿಗೂ ಮೇಲೆ ತಿಳಿಸಿರುವ ಹಾಗೆ ಪ್ರಜೆಗಳನ್ನು ಕಾಪಾಡಿದ ಶಿವನನ್ನು ನೆನೆದು ವಿಧಿ-ವಿಧಾನಗಳೊಡನೆ ಮಕ್ಕಳು, ಮರಿಯಾದಿಯಾಗಿ ಹೋಳಿ ಹಬ್ಬವನ್ನು ವೈಶಿಷ್ಟಪೂರ್ಣವಾಗಿ ಆಚರಿಸಿಕೊಂಡು ಬರುತ್ತಿದ್ದಾರೆ(ಬೋರಲಿಂಗಯ್ಯ.ಹಿ ಚಿ:೧೯೯೬: ೧೪೪-೯).

ದಾಂಡ ಹಿಡಿದ ಮಕ್ಕಳು ಪ್ರತಿ ಮನೆಗೂ ಹೋಗಿ ಪೂಜೆ ಮಾಡಿಸಿಕೊಂಡು ಹೋಳಿ ಸುಡುವ ಜಾಗಕ್ಕೆ ಬಾಯ್ ಬಡೆದುಕೊಳ್ಳುತ್ತಾ ಎಲ್ಲಾ ಹುಡುಗರು ದೊಡ್ಡವರೂ ಸೇರಿ ಬರುತ್ತಾರೆ. ಈ ದಾಂಡಾಗಳನ್ನು ಕಟ್ಟಿಗೆಯಲ್ಲಿ ಸಿಗಿಸುತ್ತಾರೆ. ಇನ್ನು ಕೆಲವರು ಕಾಮಣ್ಣನ ಆಕೃತಿಯನ್ನು ಮಾಡಿ ಸೌದೆಯ ಮೇಲೆ ಇಡುತ್ತಾರೆ.

ಈ ಕಾರ್ಯಕ್ರಮದಲ್ಲಿಯೂ ಸಹ ಜಾತಿಯಿಂದ ಹೊರಗಿದ್ದವರು ಯಾರು ಭಾಗವಹಿಸುವಂತಿಲ್ಲ. ಹೋಳಿ ಸುಡುವ ಮೊದಲು ಜಾತಿ ಪಂಚಾಯ್ತಿ ಏನೇ ಇದ್ದರೂ ಬಗೆಹರಿಸಿಕೊಳ್ಳುತ್ತಿದ್ದರು. ಗೌಡರ ಹಸ್ತದಿಂದ ಪೂಜೆ ಮಾಡಿಸಿ ಕರ್ಪೂರದಿಂದ ಬೆಳಗಿ ಎಲ್ಲರ ಒಪ್ಪಿಗೆ ಪಡೆದು ಅದೇ ಕರ್ಪೂರದಿಂದ ಹೋಳಿಗೆ ಬೆಂಕಿ ಹಚ್ಚುತ್ತಿದ್ದರು. ಬೆಂಕಿ ಹಚ್ಚುತ್ತಿದ್ದಂತಲೇ ಕಾಮಣ್ಣನಿಗೆ ನೈವೇದ್ಯವನ್ನು ಮಾಡಿ ಎಲ್ಲರಿಗೂ ತೀರ್ಥ ಪ್ರಸಾದ ವಿನಿಯೋಗ ಮಾಡುತ್ತಿದ್ದರು. ಬೆಂಕಿ ಸ್ವಲ್ಪ ಉರಿಯಲು ಪ್ರಾರಂಭಿಸಿದ ಕೂಡಲೇ ಕುಣಿಯಲ್ಲಿರುವ ನಾಣ್ಯವನ್ನು ತೆಗೆದುಕೊಳ್ಳುತ್ತಿದ್ದರು. ಹೆಣ್ಣು ಮಕ್ಕಳು ಹಾಡು ಹೇಳುತ್ತಾ ಐದು ಸಲ ಆ ಹೋಳಿಯ ಸುತ್ತಲೂ ನೀರು ಸುತ್ತು ಕಟ್ಟುತ್ತಿದ್ದರು ಇದೇ ಸಮಯಕ್ಕೆ ದಾಂಡಾಕ್ಕೆ ಕಟ್ಟಿದ ಹೋಳಿಗೆ ಕಾಯಿ ಬಟ್ಟಲು ಇವುಗಳನ್ನು ಕಿತ್ತುಕೊಳ್ಳುತ್ತಿದ್ದರು. ಬೆಂಕಿ ಜೋರಾಗಿ ಉರಿಯಲು ಪ್ರಾರಂಭಿಸಿದ ಕೂಡಲೆ ಎಲ್ಲರೂ ಬಾಯ್ ಬಡೆದು ಕೊಳ್ಳುತ್ತಾ ಐದು ಸುತ್ತು ತಿರುಗುತ್ತಿದ್ದರು. ಆಗ ಉಪ್ಪನ್ನು ಬೆಂಕಿಗೆ ಎರಚುತ್ತಿದ್ದರು. ಹೆಣ್ಣು ಮಕ್ಕಳಲ್ಲೆರು ಬಿಡಾರಗಳಿಗೆ ಹೋಗುತ್ತಿದ್ದರು. ಗಂಡಸರೆಲ್ಲರೂ ಸೌದೆ ಪೂರ್ಣ ಸುಡುವವರೆಗೂ ಅಲ್ಲಿಯೇಯಿದ್ದು ಹಳೆಯ ನೆನಪುಗಳನ್ನು ತಿರಿವಿ ಹಾಕುತ್ತ ತಂದ ಹೆಂಡ ಸರಾಯಿಗಳನ್ನು ಕುಡಿಯುತ್ತ ಕುಣಿಯುತ್ತ ಈಚೆಯಿಂದ ಆಚೆಗೆ ಆಚೆಯಿಂದ ಈಚೆಗೆ ಉರಿಯುವ ಬೆಂಕಿಯ ಮೇಲೆ ಹಾರಾಡುತ್ತಿದ್ದರು. ಇಂಥಹ ಸಂದರ್ಭದಲ್ಲಿ ಒಬ್ಬರಿಂದೊಬ್ಬರಿಗೆ ತಾಗಿ ಬೆಂಕಿಯಲ್ಲಿ ಬಿದ್ದು ಗಾಯಗೊಂಡವರೂ ಉಂಟು.

ಬೆಳಗಾದ ಮೇಲೆ ಮಹಿಳೆಯರೆಲ್ಲ ಸೇರಿ ನೀರು ತಂದು ಹೋಳಿತಣ್ಣಗಾಗುವಂತೆ ನೀರು ಸುರಿಯುತ್ತಾರೆ, ಗಂಡು ಮಕ್ಕಳು ಬೂದಿಯನ್ನು ದುಂಡುಗೆ ಮಾಡಿ ಪೂಜೆ ಮಾಡಿ ಅದೇ ಬೂದಿಯನ್ನು ಓಕಳಿಯಾಗಿ ಮಾಡಿಕೊಂಡು ಓಕಳಿ ಆಟ ಆಡುತ್ತಾರೆ. ಕಾಮದಹನದ ಬಸ್ಮವನ್ನು ಸ್ವಲ್ಪ ತೆಗೆದಿಟ್ಟುಕೊಳ್ಳುತ್ತಾರೆ.

ಹೋಳಿ ಸುಟ್ಟ ೩, ೫, ೭, ೯ ದಿನಗಳಲ್ಲಿ ಯಾವುದಾದರೊಂದು ದಿನ ತಿಥಿ ಕಾರ್ಯ ಮಾಡುತ್ತಾರೆ. ತಿಥಿ ಮಾಡುವ ದಿನ ಅಲ್ಲಿಯ ಮನೆಗಳಿಗನುಗುಣವಾಗಿ ವಿಚಾರ ಮಾಡಿ ಕುರಿಯನ್ನು ತರುತ್ತಾರೆ. ಹೋಳಿ ಸುಟ್ಟ ಪಕ್ಕದ ಜಾಗದಲ್ಲಿ ಒಲೆ ಹಚ್ಚಿ "ಘೋಟ್ ಗುಗರಿ" ಬೇಯಿಸಲು ಇಡುತ್ತಿದ್ದರು. ಕಡಲೆಕಾಳು, ಗೋದಿ, ಒಣ ಕೊಬ್ಬರಿ, ಇವುಗಳು ಚೆನ್ನಾಗಿ ಬೆಂದ ಬಳಿಕ ಬೆಲ್ಲ ಸೇರಿಸಿ ನೀರು ಕಡಿಮೆ ಆಗುವವರೆಗೂ ಬೇಯಿಸುವುದೇ ಘೋಟ್‌ಗುಗರಿ.

ಹೋಳಿ ಸುಟ್ಟ ಬೂದಿಯನ್ನು ಪುನಃ ದುಂಡಗೆ ಮಾಡಿ, ಪೂಜೆ ಮಾಡಿ ಕುರಿಯನ್ನು ಕೊಯ್ಯುತ್ತಾರೆ. ಆ ಸ್ಥಳದಲ್ಲಿ ಎಷ್ಟು ಮನೆಗಳಿವೆಯೋ ಅಷ್ಟು ಪಾಲುಗಳನ್ನು ಹಾಕುತ್ತಾರೆ.

ಕುರಿಯ ಹೊಟ್ಟೆಯೊಳಗಿರುವ ಕಳ್ಳುಪಚ್ಚಿ, ಶುದ್ಧಿಗೊಳಿಸಿ ಅದರ ಜೊತೆಗೆ ಶ್ವಾಷಕೋಶಗಳನ್ನು ಸೇರಿಸಿ ಸಣ್ಣ ಸಣ್ಣ ಚೂರುಗಳನ್ನಾಗಿ ಮಾಡಿ ಮಸಾಲೆಯನ್ನು ಹಾಕಿ ಕಲ್ಡ ಅಂದರೆ (ಪಲ್ಯ) ಮಾಡಿದ ಹಾಗೆ ಮಾಡಿ "ಘೋಟ್ ಗುಗರಿ" ಮತ್ತು ಕಲ್ಡ ಎರಡನ್ನು ತಟ್ಟೆಯಲ್ಲಿ ಬೇರೆ ಬೇರೆ ಹಾಕಿ ಕಾಮ ದೇವನಿಗೆ ಎಡೆ ಮಾಡುತ್ತಾರೆ. ಇದೇ ಪ್ರಸಾದವನ್ನು ಪ್ರತಿಯೊಬ್ಬ ಜಾತಿಯವರ ಮನೆಗಳ ಮೇಲೆ ಹಾಕಿಸುತ್ತಾರೆ. ಇದನ್ನೇ "ಚೆರಗ" ಚಲ್ಲುವುದು ಎಂದು ಕರೆಯುತ್ತೇವೆ. ಮನೆಗೊಂದರಂತೆ ಪಾಲು ಹಾಕಿ ನಂತರ ಅಂದಿನ ಖರ್ಚು ಎಷ್ಟಾಗಿದೆ ಲೆಕ್ಕಾ ಹಾಕಿ ಒಂದು ಮನೆಗೆ ಬಂದ ಖರ್ಚುಯಷ್ಟು ತಿಳಿದು ಆ ಹಣವನ್ನು ಅವರಿಂದ ತೆಗೆದುಕೊಂಡು ಪಾಲುಗಳನ್ನು ಕೊಡುತ್ತಾರೆ. ಕಾಮದಹನದ ಎಲ್ಲಾ ಕಾರ್ಯಕ್ರಮಗಳು ಮುಗಿದ ನಂತರ ಐದು ಮಂದಿ ಸೇರಿ ಬಸ್ಮವನ್ನು ತೆಗೆದುಕೊಂಡು ಕೊನೇಪಕ್ಷ ಐದು ಬೇರೆ ಬೇರೆ ಊರುಗಳಿಗೆ ಹೋಗಿ ಸಂಬಂಧಪಟ್ಟ ಭಕ್ತರಿಗೆ ಬಸ್ಮವನ್ನು ಕೊಟ್ಟು ಅವರು ಕೊಟ್ಟ ರಾಗಿ, ಮೆಣಸಿನಕಾಯಿ, ಜೋಳ, ಇತ್ಯಾದಿಗಳನ್ನು ಸಂಗ್ರಹಿಸಿ ಊರಿಗೆ ತಂದು ಅವುಗಳನ್ನು ಮಾರಾಟ ಮಾಡಿ ಬಂದ ಹಣದಲ್ಲಿ ಹೆಂಡ ಸರಾಯಿ ತಂದು ಮೋಜು ಮಾಡುತ್ತಾರೆ.

**ಹಿರಿಯರ ಪೂಜೆ**

ಅಲೆಮರಿಗಳಾಗಿ ಅಲೆಯುವಂತಹ ಈ ಜನಾಂಗ ಯಾವ್ಯಾವ ಊರುಗಳಲ್ಲಿರುತ್ತಿದ್ದರೋ, ಯಾವ್ಯಾವ ಊರಿನಲ್ಲಿ ಸಾಯುತ್ತಿದ್ದರೋ ಅವರಿಗೆ ಗೊತ್ತಿರುತ್ತಿದ್ದಿಲ್ಲ ಸತ್ತಾಗ ಯಾವ ರೀತಿಯಲ್ಲಿ ಶಾಸ್ತ್ರಗಳನ್ನು ಮಾಡಬೇಕೋ ಅದನ್ನು ಮಾಡಿ ೩ ದಿವಸದ ತಿಥಿಯನ್ನು ಮಾಡಿ ಕಾರ್ಯಪೂರೈಸುತ್ತಿದ್ದರು. ಸತ್ತ ದಿನ ಏನಾದರೂ ಅವರಿಗೆ ತಿಳಿದಿದ್ದರೆ ಅಥಾವ ವರ್ಷಕ್ಕೊಂದು ಬಾರಿ ಇಷ್ಟವಿದ್ದ ತಿಂಡಿ ತಿನಸುಗಳನ್ನು ತೆಗೆದುಕೊಂಡು ಅವರಿಗೆ ಪ್ರಿಯವಾದ ಸೇಂದಿಯೋ, ಸರಾಯಿಯೋ, ತೆಗೆದುಕೊಂಡು ಹೋಗಿ ಒಂದು ಹಸಿರು ಗಿಡದ ಬುಡದಲ್ಲಿಟ್ಟು ಸರಾಯಿಯನ್ನು ಆ ಗಿಡಕ್ಕೆ ಬಿಟ್ಟು ಒಂದು ಬೇಯಿಸಿದ ಮೊಟ್ಟೆಯನ್ನಿಟ್ಟು ನಮಸ್ಕರಿಸಿ ಬರುತ್ತಿದ್ದರು.

ಈಗಿನ ದಿನಗಳಲ್ಲಿ ಅದನ್ನೇ ಒಂದು ಆಚಾರವಾಗಿಟ್ಟುಕೊಂಡು ದೊಡ್ಡ ಹಬ್ಬ ಮಾಡುವಂತೆ ಆಚರಿಸುತ್ತಾರೆ. ಈ ಆಚರಣೆಯನ್ನು ಭಾದ್ರಪದ ಮಾಸದಲ್ಲಿ ಹುಣ್ಣಿಮೆಯ ನಂತರ ಅಮವಾಸ್ಯೆಯ ಒಳಗೆ ಅಂದರೆ ಪಿತ್ರು ಪಕ್ಷದಲ್ಲಿ ಆಚರಿಸುತ್ತಾರೆ.

ಭಾದ್ರಪದ ಮಾಸದಲ್ಲಿ ಈ ಆಚರಣೆಯನ್ನು ಯಾವ ದಿನ ಆಚರಿಸುವುದೆಂದು ಮನೆಯವರು ನಿಗದಿ ಪಡಿಸುತ್ತಾರೆ. ಅವರ ಮನೆಯಲ್ಲಿ ಎಷ್ಟುಜನ ಹಿರಿಯರನ್ನು ಪೂಜೆ ಮಾಡುವುದು ಎಂಬ ನಿರ್ದಾರದ ಮೇಲೆ ಅಷ್ಟುಜನರ ಹೆಸರಿನಲ್ಲಿ ಉಪವಾಸವಿರುವಂತೆ ಅವರವರ ಸಂಬಂಧದಲ್ಲಿ ತಿಳಿಸುತ್ತಾರೆ. ಅಂದರೆ ಗಂಡಿಗೆ ಗಂಡು, ಹೆಣ್ಣಿಗೆ ಹೆಣ್ಣು, ಈ ರೀತಿಯಲ್ಲಿ ಉಪವಾಸವಿರುತ್ತಾರೆ. ಉಪವಾಸವಿರುವವರು ಕಾರ್ಯ ಮುಗಿಯುವ ವರಗೆ ಏನು ತಿನ್ನುವಂತಿಲ್ಲ.

ಮನೆಯಲ್ಲಿ ಎಲ್ಲರೂ ಸ್ನಾನವನ್ನು ಮುಗಿಸಿ ಮನೆ ಸ್ವಚ್ಚಗೊಳಿಸಿ ಮನೆಯು

ಯಾವುದಾದರೊಂದು ಕೋಣೆಯಲ್ಲಿ ಕಳಸಗಳನ್ನು ಹೂಡುತ್ತಾರೆ. ಇದರೊಂದಿಗೆ ಭಾವ ಚಿತ್ರಗಳನ್ನು (ಫೋಟೋ) ಇದ್ದರೆ ಕಳಸದ ಹಿಂದೆ ಇಟ್ಟು ಹೂವಿನ ಹಾರಗಳನ್ನು ಹಾಕುತ್ತಾರೆ.

ಕಳಸಗಳ ಮೇಲೆ ಗಂಡಾಗಿದ್ದರೆ "ಪಂಚೆ ಟವಲ್ ಇಡುತ್ತಾರೆ" ಹೆಣ್ಣಾದರೆ ಆ ಕಳಸದ ಮೇಲೆ ಸೀರೆ ಕುಪ್ಪಸಯಿಟ್ಟು ಹೂವು ಹಾರಗಳಿಂದ ವಡವೆ ವಸ್ತ್ರಗಳಿಂದ ಶೃಂಗರಿಸುತ್ತಾರೆ.

ಆಹಾರದ ಬಗ್ಗೆ ವಿಚಾರ ಮಾಡಿದರೆ ಅವರು ತಮ್ಮ ಜೀವನದಲ್ಲಿ ಯಾವ್ಯಾವ ಪದಾರ್ಥಗಳನ್ನು ಬಹಳ ಆಸೆಯಿಂದ ಊಟ ಮಾಡುತ್ತಿದ್ದರೋ ಅಷ್ಟು ಪದಾರ್ಥಗಳನ್ನು ತಯಾರಿಸುತ್ತಾರೆ. ಉದಾ: ಸಿಹಿ ಪದಾರ್ಥಗಳು, ಎಣ್ಣೆ ಪದಾರ್ಥಗಳು , ಹಣ್ಣು ಹಂಪಲುಗಳು, ಮಾಂಸ, ಮೊಟ್ಟೆ, ಮೀನು, ಇವುಗಳಿಂದ ತಯಾರಿಸುವ ಪದಾರ್ಥಗಳು ಇವೆಲ್ಲವನ್ನು ತಯ್ಯಾರಿಸಿಕೊಂಡು ಕಳಸಗಳ ಮುಂಭಾಗದಲ್ಲಿ ಬಾಳೆ ಎಲೆ ಹಾಕಿ ತಯಾರಿಸಿದ ಎಲ್ಲಾ ಆಹಾರ ಪದರ್ಥಾಗಳನ್ನು ಎಲೆಯ ಮೇಲೆ ಬಡಿಸುತ್ತಾರೆ ಬೀಡಿ, ಸಿಗರೇಟು, ಸೇದುವವರಿದ್ದರೆ ಅದನ್ನು ಹಚ್ಚಿ ಇಡುತ್ತಿದ್ದರು. ಸೇಂದಿ, ಸರಾಯಿ, ಬ್ರಾಂಡಿ ಇತ್ಯಾದಿಗಳ ಸೇವನೆಯಿದ್ದರೆ, ಅವುಗಳನ್ನು ತಂದಿರಿಸುತ್ತಿದ್ದರು. ಮನೆಯವ ರೆಲ್ಲರೂ ಪೂಜೆ ಮಾಡಿ ಎಡೆಯನ್ನು ಹಿರಿಯರಿಗೆ ಅರ್ಪಿಸಿ ಮಾದಕ ಪಾನೀಯವನ್ನು ಅವರವರ ಹೆಸರನ್ನು ಹೇಳಿ ಬಿಡುತ್ತಿದ್ದರು. ಮುಖ್ಯವಾಗಿ ಲೋಬಾನದ ಹೊಗೆಯೊದಿಗೆ ಪೂಜೆ ಮಾಡುವ ಪದ್ಧತಿ ಬಂದಂತಹ ಸಂಬಂಧಿಕರೆಲ್ಲರೂ ತಮ್ಮ ಪೂಜೆಯನ್ನು ಹಿರಿಯರಿಗೆ ಅರ್ಪಿಸಿ ಯಾರಿಗೂ ತೊಂದರೆ ಆಗದಂತೆ ಎಲ್ಲರನ್ನು ಕಾಪಾಡಬೇಕೆಂದು ಹಿರಿಯರೆಲ್ಲರೂ ಪ್ರಾರ್ಥನೆ ಸಲ್ಲಿಸುತ್ತಿದ್ದರು.

ಎಡೆಯಲ್ಲ ನೈವೇದ್ಯ ಮಾಡಿ ಎಲ್ಲರ ಪೂಜೆ ಮುಗಿದ ಬಳಿಕ ಉಪವಾಸಯಿದ್ದವರೆಗೆ ಮೊದಲು ಊಟ ಬಡಿಸಿ ಅವರಿಗೆ ತೃಪ್ತಿ ಪಡಿಸುತ್ತಿದ್ದರು ಊಟದ ನಂತರ ಎಲ್ಲರಿಗೂ ಊಟ ಮಾಡಿಸುತ್ತಿದ್ದರು. ಬಂದವರೆಲ್ಲರೂ ತೃಪ್ತಿಯಾಗಿ ಊಟ ಮುಗಿಸಿ ಮನೆಯವರಿಗೆ ಹರಿಸಿ ಹೋಗುತ್ತಿದ್ದರು. ಈ ರೀತಿಯಾಗಿ ಹಿರಿಯರ ಪೂಜೆ ಮಾಡುವುದು ಈಗಿನ ಹೊಸ ಪದ್ಧತಿಯಾಗಿದೆ.

### ಜನಪದ ವೈದ್ಯ

ಗೋಸಂಗಿಗಳು ಜಡಿ ಬೂಟಿಗಳಿಂದ ಅನೇಕ ಔಷಧಿಗಳನ್ನು ತಯಾರಿಕೆ ಮಾಡುವವರಾಗಿದ್ದರಿಂದ ಅನೇಕ ಖಾಯಿಲೆಗಳಿಗೆ ತಾವೇ ಔಷಧಿಯನ್ನು ಕೊಟ್ಟು ಗುಣ ಪಡಿಸುತ್ತಿದ್ದರು. ಅರ್ದ ತಲೆ ನೋವು ಬಂದರೆ ಬಟ್ಟೆ ಸಾಬೂನು ಸ್ವಲ್ಪಕ್ಕೆ ಸುಣ್ಣ ಸೇರಿಸಿ ಅಂಟು ಮಾಡಿ ನೋವಿರುವ ಜಾಗದ ನರವನ್ನು ಹುಡುಕಿ ಆ ಜಾಗಕ್ಕೆ ಆ ಅಂಟನ್ನು ಹಚ್ಚಿ ಬಿಟ್ಟರೆ ಆ ಅಂಟುಗಟ್ಟಿಯಾಗಿ ಹಿಡಿದು ನೋವು ಕಡಿಮೆ ಆಗುತ್ತಿತ್ತು ಕೆಮ್ಮು ಬಂದರೆ ಶುಂಠಿ ಕಷಾಯ ಕೊಡುತ್ತಿದ್ದರು ಜ್ವರ ಬಂದಾಗ ತಲೆಗೆ ಒದ್ದೆ ಬಟ್ಟೆ ಹಾಕುವುದರಿಂದ ಕಡಿಮೆ ಆಗುತ್ತಿತ್ತು. ತಲೆಗೆ ನಿಂಬೆ ಹಣ್ಣಿನ ರಸ ಹಾಕಿ ತಿಕ್ಕುವುದರಿಂದ

ತಂಪು ಆಗುತ್ತಿತ್ತು, ಜೀರಗಿ ಕಷಾಯ ಕುಡಿಸುವುದರಿಂದ ಆಯಾಸ ಕಡಿಮೆ ಆಗುತ್ತಿತ್ತು. ಕೆಮ್ಮು ಕಡಿಮೆ ಆಗಲು ತುಳಸಿ ರಸ ಕುಡಿಸುತ್ತಿದ್ದರು. ಮಕ್ಕಳಿಗೆ ದೃಷ್ಟಿ ಆದರೆ ಕಸಬರಿಕೆಯಿಂದ ನಿವಾಳಿಸುವುದು, ಕೆಂಪು ಕಪ್ಪು ನೀರು ಮಾಡಿ ವೀಳ್ಯಾದೆಲೆಯನ್ನು ನಿವಾಳಿಸಿ ಎಸೆಯುವುದು ಅಜೀರ್ಣವಾದರೆ ಊಟವಾದ ನಂತರ ಕೈ ತೊಳೆದ ನೀರಿಗೆ ಅರಿಶಿಣ ಪುಡಿ ಸೇರಿಸಿ ಬೆಂಕಿ ಕೆಂಡವನ್ನು ಮೂರುಸಾರಿ ನಿವಾಳಿತಗೆದು ತಟ್ಟೆಯಲ್ಲಿರುವ ನೀರಿಗೆ ಹಾಕಿ ಕೆಂಡ ತುಂಬಿದ ತಂಬಿಗೆಯನ್ನು ಆ ಕೆಂಡದ ಮೇಲೆ ಬೋರಲು ಹಾಕಿದರೆ ತಟ್ಟೆಯಲ್ಲಿರುವ ನೀರೆಲ್ಲ ಶಬ್ದ ಮಾಡುತ್ತ ತಂಬಿಗೆಯ ಒಳಗೆ ಸೇರಿಕೊಳ್ಳುತ್ತದೆ. ತಂಬಿಗೆ ಹಿಡಿದು ಎತ್ತಿದರೆ ತಟ್ಟೆ ಕಚ್ಚಿಕೊಂಡೆ ಇರುತ್ತಿತ್ತು ಹೀಗೆ ಮಾಡುವುದರಿಂದ ಹೊಟ್ಟೆ ನೋವು ಕಡಿಮೆ ಆಗುತ್ತೇ ಇದಕ್ಕೆ ರಂಚು ಹಾಕುವುದು ಎಂದು ಕರೆಯುತ್ತಾರೆ. ಮಕ್ಕಳಿಗೆ ಕೆಮ್ಮು ಶೀತ ಆದರೆ ಬೆಳ್ಳೊಳ್ಳಿಯನ್ನು ಸುಲಿದು ದಾರದಲ್ಲಿ ಪೋಣಿಸಿ ಕುತ್ತಿಗೆಗೆ ಕಟ್ಟಿದರೆ ಶೀತ ಕೆಮ್ಮು ಕಡಿಮೆ ಆಗುತ್ತದೆ ಹೊಟ್ಟೆ ಉಬ್ಬಿದರೆ ವೀಳೆಯದ ಎಲೆಗೆ ಹರಳೆಣ್ಣೆ ಸವರಿ ಎಲೆ ಕಾಯಿಸಿ ಉಗುರು ಬಿಸಿಯಿರುವಾಗ ಹೊಟ್ಟೆಯ ಮೇಲೆ ಇಟ್ಟು ತೆಗೆದರೆ ಹೊಟ್ಟೆ ಸರಿ ಹೋಗುತ್ತದೆ. ಹುಳಿತೇಗು ಬಂದಾಗ ನಿಂಬೆ ಹಣ್ಣಿನ ರಸ ಸೋಡಾಪುಡಿ ಬೆರಸಿ ಕುಡಿದರೆ ಹುಳಿತೇಗು ಕಡಿಮೆ ಆಗುತ್ತದೆ. ದೃಷ್ಟಿ ಆದರೆ ಪರಕೆಕಡ್ಡಿ, ಕೂದಲು, ಮೂರುಹಿಡಿ ಮಣ್ಣು, ಏಳು ಒಣ ಮೆಣಸಿನ ಕಾಯಿ, ಬೆಳೂಳ್ಳಿ ಸಿಪ್ಪೆ, ಉಪ್ಪು ಇವೆಲ್ಲವನ್ನು ಎಡಕೈಯಲ್ಲಿ ಹಿಡಿದುಕೊಂಡು ೩ ಅಥಾವ ೫ ಸಲ ತಲೆಯಿಂದ ಕಾಲಿನವರೆಗೆ ದೃಷ್ಟಿ ತಗೆದು ಉರಿಯುವ ಬೆಂಕಿಗೆ ಹಾಕಿ ಸುಡುವುದರಿಂದ ದೃಷ್ಟಿ ಕಡಿಮೆ ಆಗುತ್ತದೆ. ಕೆಮ್ಮು ಶೀತ ನೆಗಡಿ ಆದರೆ ಒಣ ಶುಂಠಿ ಮತ್ತು ಮೆಣಸಿನಕಾಳನ್ನು ಅಲ್ಪ ಪ್ರಮಾಣದಲ್ಲಿ ಸೇರಿಸಿ ಕುಟ್ಟಿ ಪುಡಿ ಮಾಡಿ ಅದಕ್ಕೆ ಒಂದುಚೂರು ಬೆಲ್ಲವನ್ನು ಸೇರಿಸಿ ಚೆನ್ನಾಗಿ ಕುದಿಸಿ ಅರ್ಧ ಅಥಾವ ಮುಕ್ಕಾಲು ಲೋಟ ಬರುವಂತೆ ಮಾಡಿ ಬಿಸಿ ಬಿಸಿಯಾಗಿ ಕುಡಿದರೆ ಶೀತ, ನೆಗಡಿ, ಕೆಮ್ಮು ಕಡಿಮೆ ಆಗುತ್ತದೆ. ಪ್ರತಿದಿನ ೩ ರಿಂದ ೫ ಬೆಳ್ಳೊಳ್ಳಿಯನ್ನು ಸೇವಿಸುವುದರಿಂದ ರಕ್ತದ ಒತ್ತಡ ಕಡಿಮೆ ಆಗುತ್ತದೆ. ಕಣ್ಣು ಬೇನೆ ಬಂದಾಗ ತಾಯಿಯ ಎದೆ ಹಾಲನ್ನು ಕಣ್ಣಿಗೆ ಹಾಕುವುದರಿಂದ ಕಣ್ಣುಬೇನೆ ಕಡಿಮೆ ಆಗುತ್ತದೆ. ಹಲ್ಲು ನೋವು ಬಂದಾಗ ಲವಂಗ ಅಥಾವ ಲವಂಗದ ಎಣ್ಣೆ ಹಲ್ಲಿನ ಮೇಲೆ ಬಿಡುವದರಿಂದ ಹಲ್ಲುನೋವು ಕಡಿಮೆಯಾಗುತ್ತದೆ. ಅಂಟವಾಳದ ಕಾಯಿಯನ್ನು ಒಣಗಿಸಿ ಪುಡಿಮಾಡಿ ನೀರಿನಲ್ಲಿ ಬೆರಸಿ ಈ ನೀರಿನಲ್ಲಿ ಬಟ್ಟೆ ಆಭರಣಗಳನ್ನು ತೊಳೆಯಬಹುದು. ಸೀಗೇ ಕಾಯಿಯನ್ನು ಒಣಗಿಸಿ ಪುಡಿಮಾಡಿ ಸ್ನಾನ ಮಾಡುವ ಶರೀರಕ್ಕೆ ಹಚ್ಚಿ ಸ್ನಾನ ಮಾಡಿದರೆ ಚರ್ಮ ಶುದ್ಧವಾಗುತ್ತದೆ. ಮತ್ತು ತುರಕೆ ಕಡಿಮೆ ಆಗುತ್ತದೆ ಮಕ್ಕಳಿಗೆ ಅಮ್ಮ ಬಂದರೆ ಅವರ ಹಾಸಿಗೆ ಹತ್ತಿರ ಬೇವಿನಸೊಪ್ಪು ಇಡುವುದರಿಂದ ಮತ್ತು ಸ್ವಲ್ಪ ಅದನ್ನು ಅರಿದು ಅದರ ಗಂಧವನ್ನು ಶರೀರಕ್ಕೆ ಹಚ್ಚುವುದರಿಂದ ಬೇಗ ಗುಣವಾಗುತ್ತದೆ ಟೊಮಾಟೊ ಹಣ್ಣನ್ನು ಪ್ರತಿದಿನ ಸೇವಿಸುವುದರಿಂದ ರಕ್ತದಲ್ಲಿರುವ ಕೊಬ್ಬಿನ ಅಂಶ ಕಡಿಮೆ ಆಗುತ್ತದೆ. ಹೀಗೆ ಇನ್ನು ಅನೇಕ ರೀತಿಯ ಔಷಧಿಗಳನ್ನು ಜನಪದ ವೈದ್ಯ ಮಾಡುತ್ತಿದ್ದರು.

**ಕೆಮ್ಮು:** ಬಂದರೆ "ಕೋಲ್‌ಕಳ್ಳಿ" ಮರದ ಬುಡಕ್ಕೆ ಕಲ್ಲಿನಿಂದ ಜಜ್ಜಿ ಹಾಲುತೆಗೆದು ಗಂಟಲಿನ ಮಧ್ಯಭಾಗಕ್ಕೆ ಹಚ್ಚಿ ಅರ ಮೇಲೆ ಬೂದಿ ಮೆತ್ತುತ್ತಿದ್ದರು. ಕಪಾಳದಲ್ಲಿ (ಗಲ್ಲ) ಬಾಯಿಗೆ ತುಳಸಿಎಲೆರಸಕ್ಕೆ ಬೆಲ್ಲ ಮತ್ತು ಸುಣ್ಣ ಬೆರಸಿ ಹಚ್ಚಿ ಗುಣಪಡಿಸುತ್ತಿದ್ದರು.

**ಗಾಯಕ್ಕೆ :** ಶರೀರದ ಯಾವ ಭಾಗಕ್ಕೂ ಗಾಯವಾದರೆ ಮಚ್ಚಿನಿಂದ ಆದ ಗಾಯಕ್ಕೆ ಔಡಲ ಚಕ್ಕೆ ಸಣ್ಣಕ್ಕೆ ಕುಟ್ಟಿ ಗಾಯದ ಮೇಲೆ ಇಟ್ಟು ಬಡ್ಡೆಕಟ್ಟಿ ಅದರ ಮೇಲೆ ಆಗಾಗ ತಣ್ಣೀರನ್ನು ಹಾಕುವುದರ ಮೂಲಕ ಗುಣಪಡಿಸುತ್ತಿದ್ದರು.

**ಹೊಟ್ಟೆನೋವು :** ಸಮಾನ್ಯವಾಗಿ ಹೊಟ್ಟೆನೋವಿಗೆ ಕಾವಲಿ (ಹೆಂಚು)ಮಸಿ, ಉಪ್ಪು ನೀರಲ್ಲಿ ಬೆರೆಸಿ ಕುಡಿಸುತ್ತಿದ್ದರು.

**ಪಶುಪಕ್ಷಿ :** ಗೋಸಂಗಿಗಳು ತಾವು ಸಾಕುವಂತಹ ಪಶುಪಕ್ಷಿಗಳಿಗೆ ಸ್ವತಃ ಜನಪದ ವೈದ್ಯಗಾರಿಕೆ ಮಾಡುತ್ತಿದ್ದರು. ಜ್ವರ ಬಂದರೆ ಈರುಳ್ಳಿ ತಿನ್ನುಸುತ್ತಿದ್ದರು, ಕಾಲುಬಾಯಿ ಜ್ವರ ಬಂದರೆ ಕೆಸರುರಾಡಿ ಇರುವ ಸ್ತಳದಲ್ಲಿ ಕಟ್ಟುವುದರ ಮೂಲಕ ಜನಪದ ವೈದ್ಯ ಮಾಡುತ್ತಿದ್ದರು.

**ಹೊಟ್ಟೆನೋವು (ಕಾಲುದೂಳು)** ಆದರೆ 'ರಂಚು' ಬೆಂಕಿಹಾಕಿದ ತಂಬಿಗೆ ಭಾದಿತ ವ್ಯಕ್ತಿಗೆ ನಿವಾಳಿಸಿ ನೀರಿರುವ ತಟ್ಟೆಗೆ ಬೋರಲು ಹಾಕಿ ಅದರ ನೀರನ್ನು ಹಣೆಗೆ ಹಚ್ಚುತ್ತಿದ್ದರು.

**ಮಾಟಮಂತ್ರ**

ಗೋಸಂಗಿಗಳಲ್ಲಿ ಮಾಟ, ಮಂತ್ರ, ದೆವ್ವ, ಭೂತ, ಪಿಶಾಚಿ, ಇತ್ಯಾದಿಗಳ ಬಗ್ಗೆ ಬಹಳ ನಂಬಿಕೆ ಹಾಗೂ ಹೆದರಿಕೆಯೂ ಇತ್ತು. ಇವರು ಶಕ್ತಿ ಮತ್ತು ಕ್ಷುದ್ರ ದೇವತೆಗಳ ಆರಾಧಕರು, ಅಂದರೆ ಭೂತ, ಚೌಡಿ, ಕಾಳಿ, ಇವರನ್ನು ನಂಬಿದವರು ಸ್ವತ: ಇವರೇ ಮಂತ್ರ ತಂತ್ರಗಳನ್ನು ಅಭ್ಯಾಸ ಮಾಡಿದವರಲ್ಲಿ ತಮಗೇನಾದರು ತಮ್ಮ ಸಾಕಿದ ಪ್ರಾಣಿಗಳಿಗೇನಾದರು ತೊಂದರೆ ಆದರೆ ಅಥಾವ ತಾವು ಮಾಡುವ ವ್ಯವಹಾರದಲ್ಲಿ ಅಡಚಣೆ ಆದರೆ ಅದನ್ನು ಸರಿಪಡಿಸಲು ತಾವೇ ತಮಗೆ ತಿಳಿದಂತೆ ಪ್ರಯತ್ನ ಮಾಡಿಕೊಳ್ಳುತ್ತಿದ್ದರು. ಇದು ಸರಿಯಾಗದಿದ್ದಾಗ ಇವರು ತಮಗೆ ತಿಳಿದಿರುವ ದೇವರ (ಚೌಡಿ, ಭೂತಪ್ಪ) ಬಳಿಹೋಗಿ ತಮ್ಮ ಕಷ್ಟಗಳನ್ನು ಹೇಳಿ ಕೊಂಡಾಗ ದೇವರು ಪರಾಂಭರಿಸಿ ಪರಿಹಾರವಾಗಿ ಅವರಿಗೆ ಭಸ್ಮವಾಗಲಿ, ತೆಂಗಿನಕಾಯಿ, ನಿಂಬೆಹಣ್ಣು, ಕುಂಕುಮ ತಾಮ್ರದ ತಗಡು ಇತ್ಯಾದಿಗಳಲ್ಲಿ ಯಾವುದಾದರೊಂದನ್ನು ಮಂತ್ರಿಸಿ ಹೀಗೆ ಮಾಡಬೇಕೆಂದು ಹೇಳಿಕೊಡುವ ಪದ್ಧತಿ ಇವರು ದೇವರು ಕೊಟ್ಟ ಪ್ರಸಾದವನ್ನು ಮನೆಗೆ ತಂದು ಪೂಜಿಸಲು ಹೇಳಿದ್ದರೆ ಮನೆಯಲ್ಲಿರುವ ದೇವರ ಹತ್ತಿರವಿಟ್ಟು ಪೂಜಿಸುತ್ತಿದ್ದರು. ನೆಲದಲ್ಲಿ ಹೂಳಲು ಹೇಳಿದ್ದರೆ ಬಾಗಿಲಿಗೆ ಕಟ್ಟಲು ಹೇಳಿದ್ದರೆ ಭಸ್ಮವನ್ನು ಪ್ರತಿನಿತ್ಯ ಧರಿಸಲು ಹೇಳಿದ್ದರೆ, ಹೀಗೆ ದೇವರು ಹೇಗೆ ಹೇಳಿರುತ್ತಿತ್ತೋ ಹಾಗೆಯೇ ಮಾಡುತ್ತಿದ್ದರು. ಇದರಿಂದ ಇವರ ಕಷ್ಟ ಕಡಿಮೆ ಆಗಿದ್ದರೆ ಆ ದೇವರಿಗೆ ಕೋಳಿ ಬಲಿ ಕೊಟ್ಟು ಎಡೆಮಾಡಿ ಹರಕೆ ತೀರಿಸಿಬರುತ್ತಿದ್ದರು. ಒಂದು ವೇಳೆ ಅವರ

ಕಷ್ಟ ಕಡಿಮೆ ಆಗದಿದ್ದರೆ ಮತ್ತೊಂದು ಕಡೆ ಹೋಗಿ ಕೇಳುತ್ತಿದ್ದರು ಅಲ್ಲಿ ಹೇಳಿದ ಹಾಗೆ ಮಾಡುತ್ತಿದ್ದರು ಇದೇ ರೀತಿ ಇವರು ದೇವರು ಮಂತ್ರವಾದಿಗಳು ಭೂತ, ಚೌಡಿ, ಶಾಸ್ತ್ರ ಕೇಳುವುದು ಜೋಯಿಸರ ಬಳಿ ಕೇಳುವುದು ಇವು ಸಾಮಾನ್ಯವಾಗಿ ರೂಢಿಯಲ್ಲಿರುವ ಪದ್ಧತಿಗಳಾಗಿದ್ದವು.

ಅಲೆಮಾರಿಗಳಾದ ಇವರು ತಮಗೆ ಬಂದಿರುವ ಕಷ್ಟಗಳು ಬಗೆಹರೆಯದಿದ್ದಾಗ ಕ್ಷುದ್ರ ದೇವತೆಗಳ ಬಳಿಯಲ್ಲಾಗಲಿ ಮಂತ್ರವಾದಿಗಳ ಬಳಿಯಲ್ಲಾಗಲಿ ಹೋಗಿ ಯಾರಿಂದ ಅವರಿಗೆ ತೊಂದರೆ ಆಗಿದೆ ಅವರಿಗೆ ಮಾಟ ಮಾಡಿಸುತ್ತಿದ್ದರು. ಅವರ ಕಷ್ಟ ಪರಿಹಾರ ಆದರೆ ಸಾಕೆಂದು ಹರಿಕೆ ಕಾಣಿಕೆ ಮತ್ತು ಕುರಿ, ಕೋಳಿಗಳ ಬಲಿ ಕೊಡುವುದಾಗಿ ಪ್ರಾರ್ಥನೆ ಮಾಡುತ್ತಿದ್ದರು. ಅಥಾವ ಮಾಂತ್ರಿಕರಾಗಲೀ, ಭೂತ ಚೌಡಿಯಾಗಲೀ, ಯಾವುದೇ ವಸ್ತುವಿನ ಮೇಲೆ ಮಂತ್ರದ ಶಕ್ತಿಯನ್ನಾಗಲಿ ದೈವಗಳ ಶಕ್ತಿಯನ್ನಾಗಲೀ ಕೇಂದ್ರಿಕರಿಸಿ ಇವರಿಗೆ ಕೊಡುತ್ತಿದ್ದರು. ಉದಾಹರಣೆಗೆ ತೆಂಗಿನಕಾಯಿ, ತಾಮ್ರದ ತಗಡು, ಮರದ ಗೊಂಬೆ, ನಿಂಬೆಹಣ್ಣು ಹಾಗೂ ಕಟ್ಲೆ ಏನಾದರೂ ಮಾಡಿದ್ದರೆ. ಆ ವಸ್ತುಗಳನ್ನು ಮನೆಗೆ ತಂದು ಅವರು ಹೇಳಿದಂತೆ ಪೂಜೆ ಸಲ್ಲಿಸುತ್ತಿದ್ದರು. ಇದರಿಂದ ಒಳ್ಳೆಯದಾದರೆ ಆಡಿದ ಮಾತಿನಂತೆ ಹರಕೆ ಸಲ್ಲಿಸಿ ಬರುತ್ತಿದ್ದರು.

ಮಾಟ ಮಾಡುವವರು ತಮಗೆ ಆಗದವರ ಮನೆಗೆ ಹೋಗಿ ತಾವು ಮಾಟಾ ಮಾಡಿಸಿ ತಂದ ವಸ್ತಗಳನ್ನು ಯಾರಿಗೂ ಗೋತ್ತಾಗದಂತೆ ಅವರ ಮನೆಯಲ್ಲಿಟ್ಟು ಬರುತ್ತಿದ್ದರು. ಉದಾಹರಣೆಗೆ ನಿಂಬೆಹಣ್ಣುಇರಬಹುದು ತಗಡಾಗಿರಬಹುದು ಮರದ ಗೊಂಬೆ ಕಾಯಿ, ತ್ರಿಶೂಲ ಭಸ್ಮ, ಕುಂಕುಮ ಇನ್ನು ಮುಂತಾದ ವಸ್ತಗಳನ್ನು ತಂದು ಅವರ ಮನೆಯ ಬಾಗಿಲಿನಲ್ಲೋ ಗೋಡೆಗಳ ಸಂಧಿಯಲ್ಲೋ ಹಂಚಿನ ಸಂಧಿಯಲ್ಲೋ ಮಾಂತ್ರಿಕರು ಯಾವ ರೀತಿಯಲ್ಲಿ ಎಲ್ಲಿ ಇಡಬೇಕೆಂದು ತಿಳಿಸಿದಂತೆ ಇಟ್ಟು ಹೋಗು ತ್ತಿದ್ದರು.

ಕೆಲವರಿಗೆ ಮೈ ಮೇಲೆ ದೆವ್ವಗಳು ದೇವರುಗಳು ಬರುತ್ತಿದ್ದವು. ಹಿರಿಯರು ಹೇಳಿದ ಪ್ರಕಾರ ಪೂರ್ಣಾಯಸ್ಸು ತೀರದೆ ಸತ್ತವರು ಆಸೆಗಳನ್ನಿಟ್ಟುಕೊಂಡು ಸತ್ತವರು ಇವರು ದೆವ್ವಗಳಾಗುತ್ತಾರೆಂದು ಹೇಳಲ್ಪಟ್ಟಿದೆ. ಈ ದೆವ್ವಗಳು ವ್ಯಕ್ತಿಗಳ ಮೈಯಲ್ಲಿ ಸೇರಿಕೊಂಡು ಕೊಡಬಾರದ ತೊಂದರೆಯನ್ನು ಕೊಡುತ್ತವೆ. ಉದಾಹರಣೆಗೆ ಶರೀರವನ್ನು ಬಲ ಹೀನಮಾಡುವುದು ಅಮವಾಸ್ಯೆ ಹುಣ್ಣಿಮೆಗೆ ಮೈಯಲ್ಲಿ ಬಂದು ಕುಣಿಯುವುದು ಬಯ್ಯುಯವುದು ಕೂಗುವುದು ಇತ್ಯಾದಿ ಕೆಲಸವನ್ನು ಮಾಡುತ್ತವೆ. ಇನ್ನು ಕೆಲವರಿಗೆ ದೇವರು ಆಕರ್ಷಣೆ ಆಗುತ್ತದೆ. ದೇವರು ಬಂದಾಗ ಭಕ್ತಿಯಿಂದ ನಮಸ್ಕರಿಸಿ ತಮ್ಮ ಕಷ್ಟ ಸುಖಗಳನ್ನು ಕೇಳಿಕೊಳ್ಳುತ್ತಾರೆ. ಗಂಗೆಪೂಜೆ ಮಾಡುವಾಗ ಹಬ್ಬಗಳನ್ನು ಮಾಡುವಾಗ ದೇವರ ಆಕರ್ಷಣೆ ಅಗುತ್ತದೆ. ದೇವರು ಬಂದಾಗ ಹೇಳಿದ ಮಾತು ಸತ್ಯವಾಗುತ್ತದೆ ಎಂಬ ನಂಬಿಕೆಯಿದೆ.

## ಜನಪದ ನಂಬಿಕೆಗಳು

ಪ್ರತಿಯೊಂದೂ ಸಮುದಾಯವು ಜನಪದ ನಂಬಿಕೆಗಳನ್ನು ತನ್ನದೇ ಆದ ರೀತಿಯಲ್ಲಿ ಕಟ್ಟಿಕೊಂಡಿರುತ್ತದೆ, ಅದಕ್ಕೆ ಗೋಸಂಗಿ ಸಮುದಾಯವೂ ಹೊರತಲ್ಲ, ತನ್ನ ಅಲೆಮಾರಿ ತನದಲ್ಲಿ, ವ್ಯಾಪಾರ ವ್ಯವಹಾರಗಳಲ್ಲಿ, ನಿತ್ಯ ಬದುಕಿನ ಕ್ಷಣಗಳಲ್ಲಿ ಇವರನ್ನು ಆಳುವುದು ಈ ನಂಬಿಕೆಗಳೇ ಅಂದರೆ ತಪ್ಪಾಗಲಾರದು, ಅಂತಹ ನಂಬಿಕೆಗಳಲ್ಲಿ ಕೆಲವನ್ನು ಇಲ್ಲಿ ಕೊಡುವ ಪ್ರಯತ್ನ ಮಾಡಲಾಗಿದೆ.

೧. ಒಂಟಿ ಸೀನು ಒಳ್ಳೆಯದಲ್ಲ

೨. ಕನಸಿನಲ್ಲಿ ಹೂವು ತೆಂಗಿನಕಾಯಿ ಬರಬಾರದು

೩. ಪೊರಕೆಯನ್ನು ನೆಟ್ಟಗೆ ನಿಲ್ಲಿಸಬಾರದು

೪. ಒಡೆದ ಕನ್ನಡಿ ಮನೆಯಲ್ಲಿಡಬಾರದು

೫. ಮುಟ್ಟಾದ ಹೆಂಗಸು ಮೂರು ದಿನ ಮನೆಯ ಒಳಗೆ ಬಾರದು

೬. ಶುಭಕಾರ್ಯಕ್ಕೆ ಹೊರಟಾಗ ಸಲಿಕೆ, ಗುದ್ದಲಿ, ಸೌದೆ, ಎದುರಿಗೆ ಬರಬಾರದು

೭. ಪ್ರಯಾಣ ಹೊರಟಾಗ ಎಡದಿಂದ ಬಲಕ್ಕೆ ಕಾಗೆ ಹಾದು ಹೋದರೆ ಶುಭವಾಗುತ್ತದೆ

೮. ನರಿ ಮುಖ ಕಂಡರೆ ನರಿಕಂಡೆ ಸಿರಿಕಂಡೆ ದೊರೆ ಕಂಡೆ ಮುಂದೆ ಏನು ಕಂಡೇನು ಎಂಬ ಮಾತಿದೆ.

೯. ಮನೆಯವರಾಗಲಿ ನೆಂಟರಿಷ್ಟರಾಗಲಿ ಒಳ್ಳೆಯ ಕೆಲಸಕ್ಕೆ ಹೋದ ಮೇಲೆ ಸ್ನಾನ ಮಾಡುವುದು ಒಳ್ಳೆಯದಲ್ಲ.

೧೦. ಸಂಜೆಯ ಹೊತ್ತು ಮನೆಯೊಳಗಿನ ಕಸ ಹೊರಗೆಸೆಯ ಬಾರದು.

೧೧. ದೇವರಿಗೆ ಕುರಿ, ಕೋಳಿ ಬಲಿ ಕೊಡುವ ಮೊದಲು ಅವು ತಲೆಯನ್ನು ಕೊಡುವಬೇಕು.

೧೨. ಎರಡು ಹಾವುಗಳು ಒಂದಕ್ಕೊಂದು ವಿಲನಗೊಂಡಿದ್ದನ್ನು ನೋಡಿದರೆ ತಕ್ಷಣವೆ ಮನೆಗೆ ಬಾರಬಾರದು ಯಾರಾದರೂ ಬರುವ ದಾರಿಯಲ್ಲಿ ಸಿಕ್ಕರೆ ನಿಮ್ಮ ಹುಡುಗನಿಗೆ ಹಾವು ಕಚ್ಚಿದೆ ಎಂದು ಹೇಳಿಕಳುಹಿಸಬೇಕು.

೧೩. ಮದುವೆ ಮಂಗಳ ಕಾರ್ಯಗಳಲ್ಲಿ ವಿಧವೆಯರ ಪ್ರವೇಶ ನಿಶಿದ್ಧವಾಗಿದೆ.

೧೪. ಸೂತಕಯಿರುವ ಸಮಯದಲ್ಲಿ ಯಾವ ಮಂಗಲಕಾರ್ಯವೂ ಮಾಡಬಾರದು.

೧೫. ಶುಭ ಕೆಲಸಗಳಿಗೆ ಹೋಗುವಾಗ ತುಂಬಿದ ಕೊಡ ಎದುರಿಗೆ ಬಂದರೆ ಒಳ್ಳೆಯದು.

೧೬. ಕನಸಿನಲ್ಲಿ ಮಾಂಸ ಕಂಡರೆ ಒಳ್ಳೆಯದಲ್ಲ.

೧೭. ಕನಸಿನಲ್ಲಿ ಸತ್ತವರು ಕಂಡರೆ ಒಳ್ಳೆಯದು.

೧೮. ದೇವರ ಪೂಜೆ ಮಾಡಿದ ಮೇಲೆ ಬಲಗಡೆ ಪ್ರಸಾದವಾದರೆ ಒಳ್ಳೆಯದು.

೧೯. ಗೋವಿನ ಬಾಲವ ಮತ್ತು ಜನನೇಂದ್ರಿಯವನ್ನು ಮುಟ್ಟಿ ನಮಸ್ಕರಿಸಿದರೆ ಲಕ್ಷ್ಮಿಯನ್ನು ನಮಸ್ಕರಿಸಿದಂತೆ.

೨೦. ಗಂಡಿಗೆ ಬಲಕಣ್ಣು ಹೆಣ್ಣಿಗೆ ಎಡಗಣ್ಣು ಹಾರಿದರೆ ಶುಭ.

೨೧. ಕಾಗೆಯಾಗಲಿ, ಗೂಬೆಯಾಗಲೀ ಮನೆಯ ಮೇಲೆ ಕುಳಿತು ಕೂಗಬಾರದು.

೨೨. ಯಾವುದಾದರೂ ಮಾತನಾಡುವಾಗ ಕತ್ತೆ ಕೂಗಿದರೆ ಶುಭವಾಗುತ್ತದೆ.

೨೩. ಊಟಮಾಡಿಕೊಂಡು ಹೋಗು ಹಾಗೆಯೇ ಹೋಗಬೇಡ ಎಂದು ಒತ್ತಾಯ ಮಾಡಿದಾಗ ಊಟ ಬಿಟ್ಟು ಹೋಗಬಾರದು.

೨೪. ಪೊರಕೆಯನ್ನು ಕಾಲಲ್ಲಿ ಒದೆಯಬಾರದು.

೨೫. ಪ್ರಯಾಣಿಸುವಾಗ ಎದುರಿಗೆ ಶವ ಬಂದರೆ ಶುಭ.

೨೬. ಒಂಟಿ ಬ್ರಾಹ್ಮಣ ಎದುರು ಬರಬಾರದು.

೨೭. ಸುಂಟರಗಾಳಿ ಬೀಸಿದರೆ ಅದರಲ್ಲಿ ದೆವ್ವವಿರುತ್ತದೆ.

೨೮. ಅಮವಾಸ್ಯೆಯ ದಿನ ವಾಹನಗಳಿಗೆ ಪೂಜೆ ಮಾಡಿ ಕುಂಬಳಕಾಯಿ ನಿವಾಳಿಸಿ ಒಡೆದರೆ ಯಾವ ತೊಂದರೆಗಳು ಬರುವುದಿಲ್ಲ.

೨೯. ನಾವು ನಂಬಿದ ದೇವರು ನಮ್ಮನ್ನು ಕೈ ಬಿಡುವುದಿಲ್ಲಯ

೩೦. ಕನಸಿನಲ್ಲಿ ಮುತ್ತೈದೆಯರು ಬಂದರೆ ದೇವತೆಗಳು ಬಂದಂತೆ

೩೧. ಒಲೆಯೊಳಗಿನ ಬೆಂಕಿ ಶಬ್ದ ಮಾಡಿದರೆ ಯಾರೋ ನೆಂಟರು ಬರುತ್ತಾರೆ.

೩೨. ಮನಸ್ಸಿನಲ್ಲಿ ಆಸೆಯಿಟ್ಟುಕೊಂಡವರು ಪ್ರಾಯದಲ್ಲಿ ಸತ್ತವರು ದೆವ್ವಗಳಾಗುತ್ತಾರೆ.

೩೩. ಶವವನ್ನು ಮುಟ್ಟಿ ಸ್ನಾನ ಮಾಡಿದರೆ ಮನೆಯೊಳಗೆ ಬರಬಾರದು.

೩೪. ದೇವರ ಫೋಟೋಗಳನ್ನು ಉತ್ತರ ದಿಕ್ಕಿಗೆ ಇಡಬಾರದು.

೩೫. ಆಕಳಿಕೆ ಬರುತ್ತಿದ್ದರೆ ಯಾರೋ ನೆನೆಸುತ್ತಾರೆಂದು ನಂಬಿಕೆಯಿದೆ.

೩೬. ಬಾಗಲಿ ಹೊಸ್ತಿಲ ಮೇಲೆ ಕುಳಿತುಕೊಳ್ಳಬಾರದು.

## ೬

# ಒಳಾಡಳಿತ ವ್ಯವಸ್ಥೆ

### ನ್ಯಾಯ ಪಂಚಾಯಿತಿ

ಪೂರ್ವಕಾಲದಿಂದಲೂ ಅಲೆಮಾರಿಗಳಾದ ಗೋಸಂಗಿಯವರು ಒಂದೇ ಕಡೆ ನೆಲೆಸದೆ ಬೇರೆ ಬೇರೆ ಸ್ಥಳಗಳಲ್ಲಿ ಗುಂಪು ಗುಂಪುಗಳಾಗಿ ಬಿಡಾರಗಳ ರಚಿಸಿಕೊಂಡು ವಾಸ ಮಾಡುತ್ತಿದ್ದರು. ಈ ಗುಂಪಿನಲ್ಲಿ ಯಾರು ಹಿರಿಯನಾಗಿರುತ್ತಿದ್ದನೋ ಅಂಥವನು ಗುಂಪಿನ ನಾಯಕನಾಗಿರುತ್ತಿದ್ದನು. ಅವನನ್ನು ಗೌಡ ಎಂದು ಕರೆಯುತ್ತಿದ್ದರು, ಸಮುದಾಯದ ಉಳಿದವರೆಲ್ಲ ಅವರ ಸಲಹೆಯಂತೆ ನಡೆದು ಕೊಳ್ಳುತ್ತಿದ್ದರು. ಈ ನಾಯಕನೇ ಗುಂಪಿನ ಯಜಮಾನ ಎಂದು ಎಲ್ಲರೂ ಒಪ್ಪಿಕೊಳ್ಳುತ್ತಿದ್ದರು ಗುಂಪಿನಲ್ಲಿ ಯಾವುದೇ ಸಂದರ್ಭದಲ್ಲೂ ಎಂಥಹ ಸಮಸ್ಯೆಗಳೇ ಬಂದರು ಎಲ್ಲರೂ ಕೂಡಿ ಪಂಚಾಯತಿ ಸೇರಿಸಿ ಸಮಸ್ಯೆಗಳನ್ನು ಚರ್ಚಿಸಿ ಯಜಮಾನ ಕೊಟ್ಟ ತೀರ್ಪಿನಂತೆ ನಡೆದುಕೊಳ್ಳುತ್ತಿದರು ತಮ್ಮ ಸಮಸ್ಯೆಗಳನ್ನು ಯಾವುದೇ ಕಾರಣಕ್ಕೂ ಬೇರೆಯವರ ಹತ್ತಿರ ಬಗೆ ಹರಿಸಿಕೊಳ್ಳಲು ಹೋಗುತ್ತಿರಲಿಲ್ಲ. ಆ ಗುಂಪಿನ ಯಜಮಾನನೇ ತೀರ್ಪು ಗಾರ, ಉಳಿದರೆಲ್ಲರೂ ಸಹಕಾರಿಗಳಾಗಿ ಕೆಲಸ ನಿರ್ವಹಿಸುತ್ತಿದ್ದರು. ಇದು ಗೋಸಂಗಿಗಳು ಮಾಡಿಕೊಂಡಿರುವಂತಹ ಪಂಚಾಯತಿ ರಚನೆಯಾಗಿತ್ತು. ಈ ವ್ಯವಸ್ಥೆಯಲ್ಲಿ ಇಂದಿಗೂ ಅಂತಹ ಬದಲಾವಣೆಗಳೇನೂ ಆಗಿರುವುದಿಲ್ಲ.

### ಪಂಚಾಯತಿ ಕಾರ್ಯಗಳು

ನ್ಯಾಯ ಪಂಚಾಯತಿ ಸೇರಬೇಕಾದರೆ ಸಮುದಾಯದೊಳಗೆ ಯಾವುದೇ ಅಹಿತಕರ ಘಟನೆಗಳು ನಡೆದಿರಬೇಕು. ಉದಾಹರಣೆಗೆ ಸಮುದಾಯದೊಳಗೆ ಒಬ್ಬರಿಗೊಬ್ಬರು ಜಗಳ ಮಾಡಿಕೊಂಡಾಗ, ಅನೈತಿಕ ಸಂಬಂಧಗಳು ಏರ್ಪಟ್ಟಾಗ ಹೆಣ್ಣುಮಕ್ಕಳು ಬೇರೆಯರ ಜೊತೆ ಓಡಿಹೋದಾಗ. ಕಳ್ಳತನ ಮಾಡಿದರೆ ಅವಾಚ್ಯ ಶಬ್ದಗಳನ್ನು ನುಡಿದಾಗ, ಚಪ್ಪಲಿಯಿಂದ ಹೊಡೆದಾಡಿದರೆ ಹೀಗೆ ಅನೇಕ ಕಾರಣಗಳಿಗಾಗಿ ನ್ಯಾಯ ಪಂಚಾಯತಿ ಸೇರುವುದುಂಟು. ಯಾರಿಗೆ ಅನ್ಯಾಯವಾಗಿದೆಯೋ ಆತನು ಮೊದಲು ಪಂಚಾಯತಿ ಯಜಮಾನನಿಗೆ ತಿಳಿಸಬೇಕು. ಒಂದು ವೇಳೆ ಯಜಮಾನ ಊರಲ್ಲಿಲ್ಲ ದಿದ್ದರೆ ಆತ ಬರುವವರೆಗೂ ಕಾಯಬೇಕು. ಯಜಮಾನರು ಊರಿಗೆ ಬಂದಮೇಲೆ ದೂರು ಸಲ್ಲಿಸಬೇಕು. ಯಜಮಾನರು ಸ್ಥಳ, ಸಮಯ, ದಿನ ಗೊತ್ತುಪಡಿಸಿ ಎಲ್ಲರೂ

ಪಂಚಾಯತಿಗೆ ಬರುವಂತೆ ವಿಷಯ ತಿಳಿಸಲು ಭಾಟ್‌ನನ್ನು ಕಳಿಸುತ್ತಿದ್ದರು, ಈ ಜವಬ್ದಾರಿಯನ್ನು ಹೊತ್ತ ವ್ಯಕ್ತಿ ಪ್ರತಿ ಬಿಡಾರಕ್ಕೂ ಹೋಗಿ ವಿಚಾರವನ್ನು ತಿಳಿಸಿ ಬರುತ್ತಿದ್ದನು. ಎಲ್ಲರೂ ಬಂದು ಸೇರಿದ ನಂತರ ಯಜಮಾನನು ತನ್ನ ಸಹವರ್ತಿ ಗಳೊಂದಿಗೆ ಸೇರಿ ವಿಚಾರಣೆಯನ್ನು ಪ್ರಾರಂಭಿಸುತ್ತಿದ್ದರು. ಇಂದಿಗೂ ಅಲ್ಪಸ್ವಲ್ಪ ವ್ಯತ್ಯಾಸಗಳೊಂದಿಗೆ ಈ ಪಂಚಾಯತಿ ವ್ಯವಸ್ಥೆ ಮುಂದುವರೆದಿದೆ.

### ನ್ಯಾಯ ನಿರ್ಣಯಗಳು

ಮುಖಂಡರು ಸಭೆಯ ಒಪ್ಪಿಗೆಯನ್ನು ಪಡೆದು ವಿಚಾರಣೆಯನ್ನು ಪ್ರಾರಂಭಿಸು ತ್ತಿದ್ದರು. ಮೊದಲು ಯಾರು ದೂರು ಕೊಟ್ಟಿರುತ್ತಾರೋ ಆತನಿಗೆ ದೂರು ಏಕೆ ಕೊಟ್ಟೆ? ಯಾರಿಂದ ತೊಂದರೆ ಆಗಿದೆ? ಯಾವ ತರಹದ ತೊಂದರೆ ಆಗಿದೆ? ಎಂಬ ಎಲ್ಲಾ ವಿವರವನ್ನು ವಿಚಾರಿಸುತ್ತಿದ್ದರು. ಸಂಬಂಧ ಪಟ್ಟ ವಿಷಯದ ಬಗ್ಗೆ ಆತ ಕೊಡುವ ವಿವರವನ್ನು ಪಂಚಾಯತಿಗೆ ಸೇರಿದವರೆಲ್ಲರೂ ಕೇಳಿದ ನಂತರ ಅಪರಾಧಿ ಸ್ಥಾನದಲ್ಲಿರುವವನಿಗೆ ಕರೆದು ಸಂಬಂಧಪಟ್ಟ ವಿಷಯದ ಬಗ್ಗೆ ವಿಚಾರಣೆ ಮಾಡಲಾಗುತ್ತಿತ್ತು, ಪ್ರತಿಯೊಂದು ವಿವರವನ್ನು ಸೇರಿದ ಸಭೆಯ ಎದುರಿಗೇ ನೀಡಬೇಕಾಗಿತ್ತು. ಯಜಮಾನ ಆದವನು ಸದರಿ ವಿಷಯದ ಬಗ್ಗೆ ವಿಮರ್ಶೆಮಾಡಲು ಅವಕಾಶ ಕೊಡುತ್ತಿದ್ದನು. ತರುವಾಯ ಅಪರಾಧಿ ಮತ್ತು ಪಿರ್ಯಾದಿಗಳೀರ್ವರಿಗೂ ಸಂಬಂಧಪಟ್ಟ ವಿಷಯದ ಬಗ್ಗೆ ಸುದೀರ್ಘ ಚರ್ಚೆ ಮಾಡುತ್ತಿದ್ದರು. ಇವರ ವಿಚಾರಣೆಯಿಂದ ಬಹುಪಾಲು ಯಾರಿಂದ ತಪ್ಪಾಗಿದೆ ಯಾರಿಂದ ಆಗಿಲ್ಲ ಎಂಬ ವಿಚಾರ ಬಹಳ ಜನರಿಗೆ ಮಾನವರಿಕೆ ಆಗುತ್ತಿತು.

ಕೆಲವು ಸಂದರ್ಭದಲ್ಲಿ ಸಮಸ್ಯೆ ಬಹಳ ಕ್ಲಿಷ್ಟಕರವಾಗಿದ್ದರೆ, ನ್ಯಾಯ ನಿರ್ಣಯ ಮಾಡಲು ಬಹಳ ಕಷ್ಟವಾಗುವ ಸಂದರ್ಭವಿದ್ದರೆ, ಪಂಚಾಯತಿ ತೀರ್ಮಾನವನ್ನು ಮುಂದಿನ ದಿನಕ್ಕೆ ಹಾಕಿಕೊಳ್ಳುತ್ತಿದ್ದರು. ಇನ್ನು ಕೆಲವು ಸಂದರ್ಭದಲ್ಲಿ ಎರಡು,ಮೂರು ದಿನಗಳವರೆಗೆ ಪಂಚಾಯತಿ ಮಾಡಲಾಗುತಿದ್ದ ಸಂದರ್ಭಗಳೂ ಉಂಟು, ಇಂಥಹ ಸಂದರ್ಭದಲ್ಲಿ ಊಟ, ಕುಡಿತ, ಎಲೆ-ಅಡಿಕೆ, ಬೀಡಿ ಇತ್ಯಾದಿಗಳ ಖರ್ಚನ್ನು ಅಪರಾಧಿ ಮತ್ತು ಪಿರ್ಯಾದಿಗಳೀರ್ವರೂ ನಿಬಾಯಿಸಬೇಕಿತ್ತು. ಕೆಲವು ಸಂದರ್ಭಗಳಲ್ಲಿ ಮಾಂಸದ ಊಟ ಮಾಡಿಸಬೇಕಾಗಿದ್ದಿತು ಮಾಡಿದ ಅಪರಾಧಗಳು ಸಾಮಾನ್ಯವಾಗಿದ್ದರೆ ಆ ದಿನವೇ ಪಂಚಾಯತಿ ಯಜಮಾನರು ಕೊನೆಯ ಹಂತದ ವಿಚಾರಣೆ ನಡೆಸಿ ತನ್ನ ಸಹಪಾಟಿಗಳೊಂದಿಗೆ ಚರ್ಚಿಸಿ ಕೊನೆಯದಾಗಿ ತಮ್ಮ ನಿರ್ಣಯವನ್ನು ತಿಳಿಸುತ್ತಿದ್ದರು. ಯಜಮಾನರು ಕೊಟ್ಟ ತೀರ್ಮಾನವೇ ಅಂತಿಮ ತೀರ್ಮಾನ ಆಗಿರುವುದರಿಂದ ಅದಕ್ಕೆ ಎಲ್ಲರೂ ಮನ್ನಣೆಕೊಟ್ಟು ಸಭೆ ಮುಕ್ತಾಯ ಮಾಡುತ್ತಿದ್ದರು.

### ಶಿಕ್ಷೆಗಳ ವಿವರ

ಯಜಮಾನರು ಕೊಟ್ಟ ತೀರ್ಪು ಸಾಮಾನ್ಯವಾಗಿ ನ್ಯಾಯಯುತ ತೀರ್ಪಾಗಿರು ತ್ತಿದ್ದಿತು, ನ್ಯಾಯ ಪಂಚಾಯತಿ ಸಂದರ್ಭದಲ್ಲಿ ಇಂಥವರೇ ತಪ್ಪು ಮಾಡಿದ್ದಾರೆಂದು

ನಿಖರವಾಗಿ ಹೇಳುತ್ತಿದ್ದರು. ತಪ್ಪು ಮಾಡಿರುವುದು ಸತ್ಯವೆಂದು ಎಲ್ಲರಿಗೂ ಮನವರಿಕೆ ಆದಮೇಲೆ ತಪ್ಪು ಮಾಡಿದವನಿಗೆ ಶಿಕ್ಷೆ ನೀಡಲಾಗುತ್ತಿತ್ತು, ಅದು ಪಂಚಾಯತಿಯ ಧರ್ಮವು ಹೌದು. ಪಂಚಾಯತಿ ಯಜಮಾನರು ತನ್ನ ಸಹವರ್ತಿಗಳೊಂದಿಗೆ ಚರ್ಚಿಸಿ ದಂಡ ವಿಧಿಸುತ್ತಿದ್ದರು. ಆಗಿನ ದಂಡ ಹೀಗಿರುತ್ತಿತ್ತು. ಏಕ್‌ಬಾರ್‌ಆನ (೧೨ ಆಣೆಗಳು) ದೋ ಬಾರಾಆನ (೨೪ ಆಣೆಗಳು) ತೀನ್‌ಬಾರಾಆನ (೩೬ ಅಣೆಗಳು) ತಪ್ಪಿಗೆ ಸರಿಯಾಗಿ ದಂಡ ವಿಧಿಸುವಲ್ಲಿ ಈ ಮೂರರಲ್ಲಿ ಯಾವುದು ಸರಿ ತೋರುತ್ತೋ ಅದನ್ನು ವಿಧಿಸುತ್ತಿದ್ದರು. ಮಾಡಿದ ತಪ್ಪಿಗೆ ಕ್ಷಮೆಯನ್ನು ಯಾಚಿಸಿ ಇನ್ನು ಮುಂದೆ ಇಂಥಹ ತಪ್ಪುಗಳನ್ನು ಮಾಡುವುದಿಲ್ಲವೆಂದು ಹೇಳಿ ತಪ್ಪುಮಾಡಿದವನು ದಂಡಕಟ್ಟಿ ಹೋಗುತ್ತಿದ್ದನು.

ಸಾಧಾರಣ ತಪ್ಪಿಗೆ ವಿಧಿಸುವಂಥಹ ದಂಡ ಸಾಮಾನ್ಯವಾಗಿರುತ್ತಿದ್ದಿತು, ಕೆಲವು ವೇಳೆ ಯಜಮಾನರು ಕೊಟ್ಟ ತೀರ್ಪು ಒಪ್ಪುವುದಿಲ್ಲ, ವಿಧಿಸಿದ ದಂಡ ಕಟ್ಟುವುದಿಲ್ಲ ಎಂದು ಅಹಂಕಾರ ಮಾಡಿದರೆ ಆತನಿಗೆ ಸಮುದಯದಿಂದ ಬಹಿಷ್ಕಾರ ಹಾಕುತ್ತಿದ್ದರು. ಆತ ತಾನೇ ಸ್ವತಃ ನನ್ನದು ತಪ್ಪಾಗಿದೆ ನಾನು ದಂಡ ಕಟ್ಟುತ್ತೇನೆ, ಬಹಿಷ್ಕಾರ ಹಿಂದಕ್ಕೆ ತೆಗೆದುಕೊಳ್ಳಿ ಎಂದು ಪಂಚಾಯತಿ ಸೇರಿಸಿ ದಂಡ ಕಟ್ಟಿದರೆ ಆತನಿಗೆ ವಿಧಿಸಿದ ಬಹಿಷ್ಕಾರ ವಾಪಾಸ್ ತೆಗೆದುಕೊಳ್ಳುವ ಪದ್ಧತಿಯಿತ್ತು.

ಹಣಕಾಸಿನ ದಂಡವಲ್ಲದೆ ಕೆಲವು ದೈಹಿಕ ಶಿಕ್ಷೆಗಳನ್ನು ವಿಧಿಸುತ್ತಿದ್ದರು. ತಪ್ಪು ಮಾಡಿದವನು ಒಮ್ಮೊಮ್ಮೆ ಸಾರ್ವಜನಿಕವಾಗಿ ತಿಕವನ್ನು ನೆಲಕ್ಕೆ ಹಾಕಿ ಐದಾರು ಸಲ ತಿಕ್ಕಬೇಕಿತ್ತು ಅಥವಾ ತನ್ನ ಮೂಗನ್ನು ೫ ಸಲ (ನಾಕ್‌ಗಸ್) ನೆಲಕ್ಕೆ ತಿಕ್ಕಬೇಕು ಎಂದು ತಿಳಿಸುತ್ತಿದ್ದರು, ಇನ್ನೂ ಕೆಲವು ಸಾರಿ ದೈಹಿಕವಾಗಿ ಹೊಡೆಯುವುದು ಮುಂತಾದ ಶಿಕ್ಷೆಗಳಿರುತ್ತಿದ್ದವು. ಇತ್ತೀಚೆಗೆ ದೈಹಿಕ ಶಿಕ್ಷೆ ಇರುವುದಿಲ್ಲ, ಆದರೆ ನೂರರಿಂದ ಸಾವಿರಾರು ರುಪಾಯಿಗಳನ್ನು ದಂಡದ ರೂಪದಲ್ಲಿ ಪಡೆಯಲಾಗುತ್ತದೆ, ದಂಡ ರೂಪದಲ್ಲಿ ಬಂದ ಹಣವನ್ನು ಸಮುದಾಯದ ದೈವ ಕಾರ್ಯಗಳಿಗಾಗಿ ವಿನಿಯೋಗಿಸಲಾಗುತ್ತದೆ.

**ಮೂಲ ನ್ಯಾಯ ಸ್ಥಾನದೊಡನೆ ಸಂಬಂಧ**

ಗೋಸಂಗಿ ಸಮುದಾಯದಲ್ಲಿ ಯಾವುದೇ ವಿಧದ ತಂಟೆ ತಕರಾರು, ಜಗಳ ಅನ್ಯಾಯಗಳು ನಡೆದರೂ ಆಯಾ ಗ್ರಾಮದಲ್ಲಿರುವ ಕುಲ ಪಂಚಾಯತಿ ಗೌಡರ (ಹಿರಿಯರ) ಮುಂಖಾತರ ಪಂಚಾಯತಿ ಸೇರಿ ತೀರ್ಮಾನ ಮಾಡಿಕೊಳ್ಳುತ್ತಿದ್ದರು. ಒಂದು ವೇಳೆ ತೀರ್ಮಾನ ಆಗದಿದ್ದಲ್ಲಿ ಸಂಬಂಧಪಟ್ಟ ಮೂಲ ನ್ಯಾಯ ಸ್ಥಾನದೊಡನೆ ಸಂಪರ್ಕ ಮಾಡಿ ಅಂತಿಮ ತೀರ್ಮಾನ ಮಾಡುತ್ತಿದ್ದರು. ನಿಗದಿಯಾದ ಮೂಲ ಸ್ಥಾನವಿಲ್ಲದಿದ್ದರೂ ತಾವೇ ಒಂದು ಸ್ಥಳವನ್ನು ನಿಗದಿ ಪಡಿಸಿ ಆ ಸ್ಥಳಕ್ಕೆ ಪ್ರತಿ ತಾಂಡ (ಗ್ರಾಮ) ದಿಂದ ಹಿರಿಯರು ಬರುವಂತೆ ವ್ಯವಸ್ಥೆ ಮಾಡುತ್ತಿದ್ದರು, ಆ ಜಾಗದಲ್ಲಿ ಎಲ್ಲರೂ ಸೇರಿ ಪಂಚಾಯತಿ ಮಾಡುವ ವ್ಯವಸ್ಥೆ ಇದ್ದಿತು. ಈ ಪಂಚಾಯತಿ ಒಂದೇ ದಿನಕ್ಕೆ ಬಗೆ ಹರಿದರೆ ಸರಿ, ಇಲ್ಲದಿದ್ದರೆ ವಾರಗಟ್ಟಲೆ ಇದು ಮುಂದೊರೆಯುತ್ತಿದ್ದಿತು

ಆ ಸಂದರ್ಭದಲ್ಲಿ ಪಂಚಾಯತಿ ಸೇರಿದವರ ಖರ್ಚು ವೆಚ್ಚಗಳನ್ನು, ಅಂದರೆ ಪಂಚಾಯತಿಗೆ ಸೇರಿದ ಜನರಿಗೆಲ್ಲ ಊಟ, ತಿಂಡಿ, ಹೆಂಡ, ಸರಾಯಿ, ಮಾಂಸ, ಇತ್ಯಾದಿಗಳ ವ್ಯವಸ್ಥೆ ಮಾಡಬೇಕಾಗಿದ್ದಿತು. ಇದರ ಖರ್ಚನ್ನು ಯಾರು ಅಪರಾಧ ಮಾಡಿರುತ್ತಾರೋ ಅವರೇ ಭರಿಸಬೇಕಾಗಿದ್ದಿತು.

ಈ ಪದ್ಧತಿ ಈಗಲೂ ಮುಂದುವರೆದಿದ್ದು ಅದನ್ನು ಇತ್ತೀಚೆಗೆ ಗೋಸಂಗಿಗಳು ರಚಿಸಿಕೊಂಡಿರುವ ಜಿಲ್ಲಾ ಮತ್ತು ರಾಜ್ಯಮಟ್ಟದ ಸಂಘಗಳು ನಡೆಸುತ್ತವೆ.

# ೭

# ಆರ್ಥಿಕ ಜೀವನ

## ಮೂಲ ಕಸಬು

ಈ ಸಮುದಾಯದ ಮೂಲ ಕಸಬು ಜಡಿಬೂಟಿಗಳು. ಅಂದರೆ ನಾಟಿ ಔಷಧಿಗೆ ಅವಶ್ಯಕವಾದ ಗಿಡಮೂಲಿಕೆಗಳ ಎಲೆ, ಬೇರು, ತೊಗಟೆ, ಕಾಯಿ, ಇತ್ಯಾದಿಗಳಿಂದ ಔಷಧಿ ತಯಾರಿಸಿ ಮಾರಾಟ ಮಾಡುತ್ತಿದ್ದರು ಹಾಗೆ ಕಾಡಿನಲ್ಲಿ ದೊರೆಯುವ ಚಿಕ್ಕಪುಟ್ಟ ಪ್ರಾಣಿಗಳನ್ನು ಆಹಾರಕ್ಕಾಗಿ ಬೇಟೆಯಾಡುತ್ತಿದ್ದರು, ತಮ್ಮ ಆಹಾರಕ್ಕೆ ಸಾಕಾಗುವಷ್ಟು ಪ್ರಾಣಿಗಳನ್ನು ಇರಿಸಿಕೊಂಡು ಮಿಕ್ಕಿದವುಗಳನ್ನು ಮಾರಾಟ ಮಾಡುತ್ತಿದ್ದರು. ಬೇಟೆ ಕಾರ್ಯದಲ್ಲಿ ಹಾಗು ಔಷಧಿ ತಯಾರಿಕಾ ಕಾರ್ಯದಲ್ಲಿ ಹೆಣ್ಣು ಮಕ್ಕಳು ಅವರಿಗೆ ಸಹಕಾರ ನೀಡುತ್ತಿದ್ದರು. ಪರಿಮಳಯುಕ್ತ ಎಣ್ಣೆಯನ್ನು ಮುಂಬೈ, ಪುಣೆ ಮುಂತಾದ ಕಡೆಯಿಂದ ತರಿಸಿ ಅದಕ್ಕೆ ಅಗ್ಗದಲ್ಲಿ ಸಿಗುವ ಒಳ್ಳೆಣ್ಣೆ,ಕೊಬ್ಬರಿ ಎಣ್ಣೆಗಳನ್ನು ಬೆರೆಸಿ ಮಾರಾಟ ಮಾಡಿ ಜೀವಿಸುತ್ತಿದ್ದರು. ಛತ್ರಿ ರಿಪೇರಿ, ಮಣಿಸರಗಳನ್ನು ತಯಾರಿಸುವುದು, ಟೇಪು, ಕನ್ನಡಿ, ಬಾಚಣಿಕೆ ಇನ್ನಿತರ ಗೃಹಪಯೋಗಿ ವಸ್ತುಗಳಾದ ಮರದಿಂದ ತಯಾರಿಸಿದ ಲಟ್ಟಣಿಗೆ, ಕಾಟ್ರಿ(ಕೋಣಿಗೆ)ಗಳ ವ್ಯಾಪಾರ ಮಾಡುವುದು ಇನ್ನೂ ಮುಂತಾದ ಕಾರ್ಯಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದರು, ಇಂದಿಗೂ ಗೋಸಂಗಿಗಳಲ್ಲಿ ಇದು ಮುಂದು ವರೆದಿರುವುದನ್ನು ಕಾಣಬಹುದಾಗಿದೆ.

ಜಡಿಬೂಟಿ ಔಷಧಿಗಳು ಜನತೆಯ ಮೇಲೆ ಉತ್ತಮ ಪರಿಣಾಮ ಬೀರಿವೆ ಎನ್ನುವುದಕ್ಕೆ ಒಂದು ಉದಾಹರಣೆಗೆ ಗುಲ್ಬರ್ಗಾ ಜಿಲ್ಲೆಯ ಜೇವರ್ಗಿ ತಾಲ್ಲೂಕು ಕುಮ್ಮನ ಸಿರಸಗಿ ಗ್ರಾಮದಲ್ಲಿ ನೆಲೆಸಿದ ಗೇಲೋತ್ ಮನೆತನದವರು ಸುಮಾರು ೨೫೦ ವರ್ಷಗಳ ಹಿಂದಿನಿಂದಲೂ ಜಡಿಬೂಡಿಗಳಿಂದ ಔಷಧಿಗಳನ್ನು ತಯಾರಿಸಿ ಸೊಂಟ ನೋವು, ಕೀಲು ನೋವು, ಚರ್ಮವ್ಯಾದಿ ಉಬ್ಬಸ, ಮೂಲವ್ಯಾದಿ, ಕರಳು ಬೇನೆ, ಇನ್ನು ಅನೇಕ ಮಾರಕ ಕಾಯಿಲೆಗಳಿಗೆ ಔಷಧಿಗಳನ್ನು ಕೊಟ್ಟು ಗುಣಪಡಿಸು ತ್ತಿರುವುದನ್ನು ಕಾಣಬಹುದಾಗಿದೆ. ಇವರಲ್ಲಿಯೇ ಉತ್ತಮ ನಾಟಿ ವೈದ್ಯರೆಂದು **ಕಿಶನ್‌ಸಿಂಗ್ ಗೇಲೋತ್‌**ರನ್ನು ಸ್ಥಳೀಯರು ಗುರುತಿಸುತ್ತಾರೆ, ಇವರ ಪೂರ್ವಿಕರು ಆಗಿನಕಾಲದ ಬ್ರಿಟೀಷ್ ಅಧಿಕಾರಿಗಳಿಗೂ ಜಹಗೀರ್‌ದಾರ್‌ರವರಿಗೂ ಔಷಧಿಗಳನ್ನು ಕೊಡುತಿದ್ದರಂತೆ, ಆದರೆ ಕಾಲಾಂತರದಲ್ಲಿ ಇವರ ವ್ಯವಹಾರ ಕಡಿಮೆ ಯಾಯಿತಂತೆ,

ಆ ಸಂದರ್ಭದಲ್ಲಿ ಅವರು ಈ ಸ್ಥಳವನ್ನು ಬಿಟ್ಟು ಬೇರೆ ಸ್ಥಳಕ್ಕೆ ಹೋಗುವ ಸಿದ್ಧತೆ ಮಾಡಿಕೊಡರಂತೆ, ಇವರು ನೆಲೆ ಬದಲಿಸುವ ವಿಷಯ ಅನೇಕರಿಗೆ ತಿಳಿದು ಜಹಗೀರ್ ದಾರ್‌ರವರಿಗೆ ತಿಳಿಸಿದರಂತೆ, ಜಹಗೀರ್‌ದಾರ್‌ರವರು ಕೂಡಲೆ ಒಬ್ಬ ಸೇವಕನನ್ನು ಕರೆದು ಗಿಡಮೂಲಿಕೆ ವ್ಯಾಪಾರ ಮಾಡುತ್ತಿರುವರಲ್ಲಿ ಹಿರಿಯನಾದವನನ್ನು ಕರೆದುಕೊಂಡು ಬಾ ಎಂದು ತಿಳಿಸಿದರು. ಸೇವಕನು ಕೂಡಲೆ ಹೋಗಿ ಗೋಸಂಗಿ ಹಿರಿಯನನ್ನು ಕರೆದುಕೊಂಡು ಬಂದನಂತೆ, ಜಹಗೀರ್‌ದಾರರು ಏನಯ್ಯ, ನೀವು ನಮ್ಮ ಊರು ಬಿಟ್ಟು ಹೋಗುತ್ತಿರುವಿರಂತೆ ಏಕೆ ಎಂದು ಕೇಳಿದರು. ಗೋಸಂಗಿ ಹಿರಿಯನು ಸ್ವಾಮಿ ತಮ್ಮ ಸಾನಿಧ್ಯದಲ್ಲಿ ಬಹಳ ದಿನಗಳಿಂದಲೂ ವಾಸಿಸುತ್ತಿದ್ದೆವು, ಈಗ ನಮ್ಮ ವ್ಯವಹಾರ ಕಡಿಮೆ ಆಗುತ್ತಾ ಬಂದಿದೆ. ನಮಗೆ ಜೀವನ ನಡೆಸುವುದು ಕಠಿಣವಾಗುತ್ತಿದೆ. ಜೀವನೋಪಾಯಕ್ಕಾಗಿ ಬೇರೆ ಸ್ಥಳಕ್ಕೆ ಹೋಗದೆ ವಿಧಿಯಿಲ್ಲವಾಗಿದೆ, ಹಾಗಾಗಿ ಗುಳೇ ಹೊರುಟಿರುವೆವು ಎಂದು ದುಃಖದಿಂದ ಹೇಳಿಕೊಂಡ, ಆಗ ಜಹಗೀರ್‌ದಾರರು ನೀವು ಯಾರೂ ನಮ್ಮ ಊರನ್ನು ಬಿಟ್ಟು ಹೋಗಬಾರದು ನಿಮ್ಮ ಜೀವನಕ್ಕೆ ಅವಶ್ಯವಾದ ಜಮೀನನ್ನು ನಾನು ಕೊಡುತ್ತೇನೆ ದುಡಿಮೆ ಮಾಡಿ ಜೀವನ ಮಾಡಿರೆಂದು ತಿಳಿಸಿದರು. ಆ ಹಿರಿಯನಿಗೆ ಜಹಗೀರ್‌ದಾರರ ಮಾತು ಕೇಳಿ ನಂಬಲೂ ಆಗದೆ,ಬಿಡಲೂ ಆಗದೆ ಹೆದರಿ ನಡಗುತ್ತ ನಿಂತು ಬಿಟ್ಟನಂತೆ, ಜಹಗೀರ್‌ದಾರರು ಹೆದರಬೇಡ ನಿಮಗೆ ಸುಮ್ಮನೇ ಜಮೀನು ಕೊಡುತ್ತಿಲ್ಲ ನಿಮ್ಮ ಸಮುದಾಯದ ವೈದ್ಯರುಗಳು ನಮ್ಮ ಪ್ರಾಂತ್ಯದ ಅನೇಕ ಊರುಗಳಲ್ಲಿ ಜನರಿಗೆ ಔಷಧಿಯನ್ನು ಕೊಟ್ಟು ಅನೇಕ ಕಾಯಿಲೆ ಗುಣಪಡಿಸಿರುವುದು ನನ್ನ ಗಮನಕ್ಕೆ ಬಂದಿದೆ. ನಿಮ್ಮಂಥ ವೈದ್ಯರನ್ನು ನಾನು ಗುಳೇ ಹೋಗುವುದಕ್ಕೆ ಬಿಡುವುದಿಲ್ಲ, ನೀವೆಲ್ಲರೂ ಇಲ್ಲಿಯೇ ಇರಬೇಕೆಂದು ತಿಳಿಸಿ **"೬೦"** ಎಕರೆ ಜಮೀನನ್ನು ಮಂಜೂರು ಮಾಡಿಕೊಟ್ಟರಂತೆ.ಜಹಗೀರದಾರರು ಜಮೀನು ಕೊಟ್ಟ ಧಾಖಲೆಗಳು ಇಂದಿಗೂ ಆ ವಶಸ್ಥರ ಬಳಿ ಇವೆ. ಈಗಲೂ ಈ ಜನ ಆ ಊರಿನಲ್ಲಿಯೇ ನೆಲೆಸಿರುತ್ತಾರೆ. **ಕಿಶನ್‌ಸಂಗ್ ಗೇಲೋತ್**‌ರವರು ಈಗಲೂ ಸಹ **ಆರ್**.ಎಂ.ಪಿ ವೈದ್ಯರಾಗಿ ಗುಲ್ಬರ್ಗದಲ್ಲಿ ಸೇವೆ ಮಾಡುತ್ತಿರುವರು.

**ವೃತ್ತಿ :** ಆಂಧ್ರ, ಕರ್ನಾಟಕ, ತಮಿಳುನಾಡು, ಕೇರಳಗಳಲ್ಲಿ ನೆಲೆಸಿರುವ ಗೋಸಂಗಿಗಳ ಕುರಿತು ವಿವರಿಸುತ್ತಾ ಎನ್‌ಸೈಕ್ಲೋಪಿಡಿಯಾ ಆಫ್ ಸೆಡ್ಯೂಲ್ಡ್ ಕಾಸ್ಟ್ ಇನ್ ಇಂಡಿಯಾ ಕೃತಿಯಲ್ಲಿ ೧೯೬೧ ರಿಂದ ೨೦೦೧ರ ವರೆಗಿನ ಜನಗಣತಿಯನ್ನು ಆಧರಿಸಿ ಗೋಸಂಗಿಗಳ ವೃತ್ತಿಯ ಕುರಿತು ವಿವರಣೆ ನೀಡಿದ್ದಾರೆ.

ಕರ್ನಾಟಕದಲ್ಲಿ ೧೯೬೧ ರಿಂದ ೭೧ರವರೆಗೆ ಯಾವುದೇ ಮಾಹಿತಿ ಲಭ್ಯವಿಲ್ಲ ದಿರುವುದನ್ನು ತಿಳಿಸುತ್ತಾರೆ. ೧೯೭೧ರ ಜನಗಣತಿಯಲ್ಲಿ ಗೋಸಂಗಿ ಸಮುದಾಯದ ಒಟ್ಟು ಕೆಲಸಗಾರರು ಪುರುಷರು ೩ ಎಂದು ಹೇಳಿದ್ದಾರೆ. ಅಲ್ಲಿ ದೊರೆತ ಮಾಹಿತಿಯ ಪ್ರಕಾರ ಗಣಿಗಾರಿಕೆ ಮತ್ತು ಕ್ವಾರೆ ಕೆಲಸದಲ್ಲಿ ೩ ಗೋಸಂಗಿ ಪುರುಷರು ನಿರತರಾಗಿದ್ದರು ಎಂಬುದನ್ನು ತಿಳಿಸುತ್ತಾರೆ.

೧೯೮೧ರ ಗಣತಿಯಂತೆ ೧೮೫ ಪುರುಷರು ೬೩ ಮಹಿಳೆಯರು ಭಿನ್ನ ಭಿನ್ನ ವೃತ್ತಿಗಳಲ್ಲಿ ತೊಡಗಿದ್ದುದಾಗಿ ಮಾಹಿತಿ ದೊರೆಯುತ್ತದೆ. ೭ ಪುರುಷರು ವ್ಯವಸಾಯಗಾರರಾಗಿಯೂ, ೨೪ ಪುರುಷರು ೧೬ ಮಹಿಳೆಯರು ಕೃಷಿಕೂಲಿಗಳಾಗಿಯೂ, ಮೀನುಗಾರಿಕೆ, ಅರಣ್ಯೋತ್ಪನ್ನಗಳನ್ನು ಮಾರಿ ಜೀವಿಸುವವರಲ್ಲಿ ೧೪ ಪುರುಷರು ಹಾಗೂ ಸಣ್ಣಪುಟ್ಟ ರಿಪೇರಿ, ಪ್ಲಾಸ್ಟಿಕ್ ವಸ್ತುಗಳ ಮಾರಾಟ, ತಯಾರಿಕೆಯಲ್ಲಿ ೭೫ ಪುರುಷರು ಮತ್ತು ೩೨ ಮಹಿಳೆಯರು ತೊಡಗಿರುವುದು ತಿಳಿದುಬರುತ್ತದೆ. ಇನ್ನೂಳಿದ ಇತರೇ ಕೆಲಸಗಳಲ್ಲಿ ೬೫ ಪುರುಷರು ೧೫ ಮಹಿಳೆಯರು ತೊಡಗಿರುವುದಾಗಿ ತಿಳಿಸುತ್ತಾರೆ.

೧೯೯೧ರ ಗಣತಿ ಪ್ರಕಾರ ವ್ಯವಸಾಯದಲ್ಲಿ ತೊಡಗಿದ ಗೋಸಂಗಿಗಳ ಸಂಖ್ಯೆಯಲ್ಲಿ ಪುರುಷರು ೪೨ ಹಾಗೂ ಮಹಿಳೆಯರು ೧೫, ಕೃಷಿಕೂಲಿಗಳಲ್ಲಿ ೭೬ ಪುರುಷರ, ೧೩೪ ಮಹಿಳೆಯರು, ಅರಣೋತ್ಪನ್ನಗಳ ಸಂಗ್ರಹಣೆ, ಮಾರಾಟ, ಮೀನುಗಾರಿಕೆಗಳಲ್ಲಿ ೧೧ ಪುರುಷರು ಒಬ್ಬ ಮಹಿಳೆ, ಗಣಿಗಾರಿಕೆ ಮತ್ತು ಕ್ವಾರೆ ಕೆಲಸಗರರಾಗಿ ೨ ಪುರುಷರು. ಪ್ಲಾಸ್ಟಿಕ್ ವಸ್ತುಗಳ ತಯಾರಿಕೆ, ಮಾರಾಟ, ರಿಪೇರಿಗಳಲ್ಲಿ ೮೦ ಪುರುಷರು ೧೨ ಮಹಿಳೆಯರು ಇತರೆ ಕೆಲಸಗಳಲ್ಲಿ ೩೦೦ ಪುರುಷರು ಹಾಗೂ ೭೪ ಮಹಿಳೆಯರು ಕಾರ್ಯನಿರತವಾಗಿರುವುದನ್ನು ತಿಳಿಸಲಾಗಿದೆ.

೨೦೦೧ರ ಗಣತಿ ಪ್ರಕಾರ ಗೋಸಂಗಿಗಳಲ್ಲಿರುವ ಒಟ್ಟು ಕೆಲಸಗಾರರು ೬೩೦ ಇದ್ದು ಪುರುಷರು ೪೪೧ ಹಾಗೂ ಮಹಿಳೆಯರು ೧೮೯ರಷ್ಟು ಕಂಡಬಂದಿದ್ದಾರೆ. ವ್ಯವಸಾಯದಲ್ಲಿ ನಿರತವಾಗಿದ್ದ ಪುರುಷ ೫೧, ಮಹಿಳೆಯರು ೧೬ ಜನ, ಕೃಷಿಕೂಲಿಗಳು ಪುರುಷರು ೨೮, ಮಹಿಳೆಯರು ೭೨ ಇತರೆ ಕೆಲಸಗಳಲ್ಲಿ ನಿರತರಾದವರಲ್ಲಿ ಪುರುಷರು ೩೬೨ ಮಹಿಳೆಯರು ೧೦೧ ಜನ ಕಂಡುಬಂದಿದ್ದಾರೆ. ಅನುಬಂಧ ಅಂಕಿಅಂಶಗಳು ನಂದೂರಾಮ್ ೨೮೪,೨೮೫

೨೦೦೭ರಲ್ಲಿ ಸಮೀಕ್ಷೆ ನಡೆಸಿದಾಗ ದೊರೆತ ವಿವಿಧ ವೃತ್ತಿಗಳನ್ನು ಹೊಂದಿದ ಗೋಸಂಗಿಗಳ ವಿವರ ಈ ಕೆಳಗಿನಂತಿದೆ.

**ಕೋಷ್ಟಕ: ೭.೧ ಗೋಸಂಗಿಗಳ ಆರ್ಥಿಕ ಸ್ಥಾನಮಾನ (೨೦೦೭)**

| ಸಂ. | ವಿವರ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧ | ವ್ಯವಸಾಯಗಾರರು | ೦೧ | – | ೦೧ |
| ೨ | ಕೃಷಿಕೂಲಿ | ೦೧ | – | ೦೧ |
| ೩ | ಸರ್ಕಾರಿ ನೌಕರರು | ೦೧ | ೦೨ | ೦೩ |
| ೪ | ವ್ಯಾಪಾರ | ೦೨ | ೦೫ | ೦೭ |
| ೫ | ಇತರೆ ವೃತ್ತಿಗಳು | ೮೫ | ೯೧ | ೧೭೬ |
| | ಒಟ್ಟು | ೮೯ | ೯೯ | ೧೮೮ |

ಕೋಷ್ಟಕದಲ್ಲಿನ ಅಂಕಿಅಂಶಗಳಿಂದ ಗೋಸಂಗಿಗಳು ವಿವಿಧ ಬಗೆಯ ವೃತ್ತಿಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದು ವ್ಯವಸಾಯ ನಿರತರಾದವರು ಕೇವಲ ಒಬ್ಬ ಪುರುಷ ಮಾತ್ರ ಕಂಡುಬಂದರೆ. ಕೃಷಿಕೂಲಿಗಳಲ್ಲಿ ಒಬ್ಬ ಮಹಿಳೆ ಮಾತ್ರ ಕಂಡುಬಂದಿದ್ದಾರೆ. ಸರ್ಕಾರಿ ನೌಕರರಲ್ಲಿ ಒಬ್ಬ ಪುರುಷ ಇಬ್ಬರು ಮಹಿಳೆಯರಿದ್ದಾರೆ. ಚಿಕ್ಕ ವ್ಯಾಪಾರದಲ್ಲಿ ನಿರತರಾದವರಲ್ಲಿ ಪುರುಷರು ಇಬ್ಬರಿದ್ದರೆ ಮಹಿಳೆಯರು ಐದು ಜನ ಕಂಡುಬಂದಿದ್ದಾರೆ. ಚಿಂದಿ ಆಯುವುದು, ಭಿಕ್ಷಾಟನೆ, ಚಿಕ್ಕಪುಟ್ಟ ಕೂಲಿ, ಆಟೋರಿಕ್ಷಾ ಚಾಲನೆ, ಗಿಡಮೂಲಿಕೆ ಔಷಧ ವ್ಯಾಪಾರ ಇತ್ಯಾದಿಗಳಲ್ಲಿ ತೊಡಗಿದವರಲ್ಲಿ ಪುರುಷರು ೮೯ ಜನ ಇದ್ದರೆ ಮಹಿಳೆಯರು ೯೧ ಜನ ಕಂಡುಬರುತ್ತರೆ. ಮುಖ್ಯವಾಗಿ ಮಹಿಳೆಯರು, ಗಿಡಮೂಲಿಕೆ ವ್ಯಾಪಾರ, ಚಿಂದಿಆಯುವ ಕಾಯಕದಲ್ಲಿ ಹೆಚ್ಚು ನಿರತರಾಗಿರುವುದು ಕಂಡುಬರುತ್ತದೆ.

**ಬಳಸುವ ಉಪಕರಣಗಳು**

ಕುಟುಂಬದ ಯಜಮಾನ ಸಂಪೂರ್ಣ ಜವಬ್ದಾರಿ ವಹಿಸಿಕೊಂಡು ಕುಟುಂಬದ ನಿರ್ವಹಣೆ ಮಾಡುತ್ತಾನೆ, ಹೊರಗಿನ ವ್ಯವಹಾರಗಳನ್ನು ಪುರುಷರು ನೋಡಿಕಂಡರೆ ಮನೆಯ ನಿರ್ವಹಣೆಯನ್ನು ಮಹಿಳೆ ನೋಡಿಕೊಳ್ಳುವಳು, ಮಣ್ಣಿನಿಂದ ಮಾಡಿದ ಮಡಿಕೆ ಕುಡಿಕೆಗಳನ್ನು ಆಹಾರ ತಯಾರಿಸಲು, ದವಸ ಧಾನ್ಯಗಳನ್ನು ಹಾಕಿ ಇಡಲು ಬಳಸುತ್ತಿದ್ದರು. ಸಾಧಾರಣ ದರ್ಜೆಯ ಬಟ್ಟೆಯನ್ನು ತೊಡಲು ಉಪಯೋಗಿಸುತ್ತಿದ್ದರು. ಹಾಸಲು ಈಚಲಗರಿಯಿಂದ ಮಾಡಿದ ಚಾಪೆಗಳನ್ನು ಹೊದೆಯಲು ಹಳೆಯ ಬಟ್ಟೆ ಚೂರುಗಳನ್ನು ಸೇರಿಸಿ ಹೊಲಿದ "ಕೌದಿ"ಗಳನ್ನು ಬಳಸುತ್ತಿದ್ದರು. ಇತ್ತೀಚೆಗೆ ಮಣ್ಣಿನ ಮಡಕೆಗಳ ಬದಲಿಗೆ ಕಂಚು, ಹಿತ್ತಾಳೆ,ಸ್ಟೀಲ್ ಪಾತ್ರೆಗಳನ್ನು ಅಡುಗೆ ಮಾಡಲು ಬಳಸುವರು, ಹಾಸಿ ಹೊದೆಯಲು ಕೌದಿಯೊಂದಿಗೆ ಜಮಖಾನ ಚಾದರುಗಳ ಪ್ರವೇಶ ವಾಗಿವೆ. ಬೇಟೆಯಾಡುವ ಸಲುವಾಗಿ ಬಲೆಗಳನ್ನು ಸ್ವತಃ ಹೆಣೆಯುತ್ತಿದ್ದರು. ಅರಣ್ಯ ನೀತಿಯಿಂದಾಗಿ ಇಂದು ಇವರು ಬೇಟೆಯಾಡುವುದನ್ನು ನಿಲ್ಲಿಸಿದ್ದಾರೆ, ಔಷಧಿಗಳನ್ನು ತಯಾರಿಸಲು ಬೇಕಾಗುವ ಸಾಮಗ್ರಿಗಳನ್ನು ಇಟ್ಟುಕೊಂಡಿರುತ್ತಾರೆ. ಕುಟುಂಬದ ನಿರ್ವಹಣೆಗೆ ಹಸು, ಕುರಿ, ಕೋಳಿ, ಕುದುರೆ ಇವುಗಳನ್ನು ಸಾಕಿಕೊಳ್ಳುತ್ತಿದ್ದರು. ಪ್ರತಿದಿನ ಒಂದಲ್ಲ ಒಂದು ಕಸಬನ್ನು ಮಾಡಿ ಬಂದ ಹಣದಿಂದ ತಮಗೆ ಬೇಕಾಗುವ ಉಪಕರಣಗಳನ್ನು ತಂದು ತಮ್ಮ ಜೀವನದ ನಿರ್ವಹಣೆ ಮಾಡುತ್ತಿದ್ದರು. ಕಾಡಿನಿಂದ ತರುವ ಗಿಡಮೂಲಿಕೆಗಳನ್ನು ಯಾವ್ಯಾವ ಗಿಡಮೂಲಿಕೆಗಳು ಯಾವ್ಯಾವ ಸ್ಥಳದಲ್ಲಿ ಸಿಗುತ್ತವೆ ಎಂಬುದನ್ನು ಮೊದಲೇ ತಿಳಿದುಕೊಳ್ಳುತ್ತಿದ್ದರು. ಕಾಡಿನಿಂದ ತರುವ ಮುಖ್ಯ ವಾದ ಬೇರುಗಳು, ತೊಗಟೆಗಳು, ಎಲೆಗಳನ್ನು ಗುರುವಾರ ಅಥಾವ ಭಾನುವಾರ ತರುತ್ತಿದ್ದರು. ಇನ್ನು ಕೆಲವು ಔಷಧಿಗಳನ್ನು ಅಮವಾಸ್ಯೆಯಂದು ತರುತ್ತಿದ್ದರು. ಕೆಲವು ಕಚ್ಚಾವಸ್ತಗಳನ್ನು ನೆರಳನಲ್ಲಿಯೂ ಇನ್ನು ಕೆಲವು ಔಷಧಿಗಳನ್ನು ಬಿಸಿಲಿನಲ್ಲಿಯೂ ಒಣಗಿಸುತ್ತಿದ್ದರು. ಇದಕ್ಕೆ ಕಾಲದ ಪರಿಮಿತಿಯಿರುತ್ತಿತ್ತು ಇಷ್ಟೇದಿನ ಒಣಗಿಸಬೇಕೆಂಬ ನಿಯಮವಿರುತ್ತಿತ್ತು. ನಂತರ ಆ ಕಚ್ಚಾವಸ್ತಗಳಿಗೆ ಬೇರೆ ಬೇರೆ ಚಕ್ಕೆ, ಸೊಪ್ಪು ಬೀಜಗಳನ್ನು

ಪ್ರಮಾಣಕ್ಕೆ ತಕ್ಕಂತೆ ಬೆರಸಿ ಕುಟ್ಟಿ ಪುಡಿಯನ್ನು ತಯಾರಿಸುತ್ತಿದ್ದರು. ಇನ್ನು ಕೆಲವು ಔಷಧಿಗಳನ್ನು ಬೇಯಿಸುವುದರಿಂದ ತಯಾರಿಸುತ್ತಿದ್ದರು. ದ್ರವ್ಯ ಔಷಧಿಗಳನ್ನು ಸಣ್ಣ ಸಣ್ಣ ಗಾಜಿನ ಬಾಟಲಿಗಳಲ್ಲಿ ತುಂಬಿ ಭದ್ರವಾದ ಬಿರುಡೆಯನ್ನು ಹಾಕುತ್ತಿದ್ದರು ಇನ್ನು ಕೆಲವು ಪುಡಿಯನ್ನು ಪೊಟ್ಟಣ ಕಟ್ಟಿಟ್ಟುಕೊಳ್ಳುತ್ತಿದ್ದರು. ಈ ಎಲ್ಲಾ ಔಷಧಿಗಳ ಬಾಟಲಿಗಳನ್ನು ಭದ್ರವಾಗಿಟ್ಟುಕೊಳ್ಳಲು ಮರದಿಂದ ಮಾಡಿಸಿದ ಚಿಕ್ಕ ಪೆಟ್ಟಿಗೆಯಲ್ಲಿಟ್ಟು ಕೊಳ್ಳುತ್ತಿದ್ದರು. ಇವರು ತಯಾರಿಸಿದ ಔಷಧಿಗಳಲ್ಲಿ ಮಾತ್ರೆಗಳು, ಪುಡಿಔಷಧಿ, ದ್ರವ್ಯ ರೂಪದ ಔಷಧಿಗಳಿರುತ್ತಿದ್ದವು. ಕೆಲವು ಬೇರುಗಳನ್ನು ಒಣಗಿಸಿ ಇಟ್ಟುಕೊಳ್ಳುತ್ತಿದ್ದರು ಕಾರಣ ಕಾಯಿಲಿಗೆ ಕಾರಣ ತಿಳಿದು ನೀರಿನಲ್ಲೋ ಜೇನುತುಪ್ಪದಲೋ ನಿಂಬೆರಸದಲೋ ತಿಕ್ಕಿ ನೆಕ್ಕಲು ಅಥಾವ ಕುಡಿಯಲು ಕೊಡುತ್ತಿದ್ದರು. ಇವರು ಜನರಿಗೆ ಭಾನುವಾರ ಅಥಾವ ಗುರುವಾರ ಔಷಧಿಯನ್ನು ಸೇವಿಸಲು ತಿಳಿಸುತ್ತಿದ್ದರು. ಔಷಧಿಗಳನ್ನು ಬೇಯಿಸಲಿಕ್ಕೆ ಬೇಕಾಗುವ ಪಾತ್ರೆಗಳನ್ನು ಕುಟ್ಟಲು ಬೇಕಾಗುವ ಕಲ್ಲು ಹಾಗೂ ಕಲ್ಲು ಗುಂಡಗಳನ್ನು ಶುಬ್ರವಾಗಿ ಇಟ್ಟುಕೊಳ್ಳುತ್ತಿದ್ದರು. ಇವರಿಗೆ ಬೇಕಾಗುವ ಉಪಕರಣಗಳು ಯಾವುವೆಂದರೆ ಚಾಕು, ನೀರು, ಬಟ್ಟಲು, ಕತ್ತರಿ, ಕಲ್ಲು, ಕಲ್ಲುಗುಂಡು, ಪಾತ್ರೆ ಬಟ್ಟೆ ಬಾಟಲಿಗಳು, ಕಾಗದ ದಾರ, ಬಾಟಲಿ ಮುಚ್ಚಳ ಲೇಬಲ್ ಇತ್ಯಾದಿಗಳು.

**ಕಸುಬಿನ ಬಗೆಗೆ ನಂಬಿಕೆಗಳು**

ಇವರ ಮುಖ್ಯ ಕಸುಬು ನಾಟಿ ಔಷದ ತಯಾರಿಕೆ ಹಾಗೂ ಗಂಧದೆಣ್ಣೆ ವ್ಯಾಪಾರವಾಗಿದೆ, ಜೊತೆಗೆ ಗೋವುಗಳನ್ನು ಸಾಕುವುದು,ಅವುಗಳ ಮಾರಾಟವಾಗಿತ್ತು. ಇವರು ನಾಟಿ ಔಷದಿಗೆ ಬೇಕಾದ ನಾರು ಬೇರುಗಳನ್ನು ಸಂಗ್ರಹಿಸಲು ಹೊರಟಾಗ ಕೆಲವು ನಿಯಮಗಳನ್ನು ಕಡ್ಡಾಯವಾಗಿ ಪಾಲಿಸುವರು, ಅಮವಾಸ್ಯೆಯ ದಿನ ಮಾತ್ರ ಅಮೃತನ ಬಳ್ಳಿ ಕಾಡಿನಿಂದ ತಂದರೆ ಮಾತ್ರ ಆ ಬಳ್ಳಿಯಿಂದ ಔಷದಿ ತಯಾರಿಸಲು ಬರುತ್ತದೆ ಎನ್ನುವ ನಂಬಿಕೆ ಅವರಲ್ಲಿದೆ, ಕಸುಬಿಗೆ ಸಂಬಂಧಿಸಿದ ಕೆಲಸಕ್ಕೆ ಹೊರಟಾಗ ಯಾರು ಅಡ್ಡ ಬಾಯಿ ಹಾಕಬಾರದು, ಅತ್ತರು ಮಾರಲು ಹೊರಡುವ ಮೊದಲು ಆಪೆಟ್ಟಿಗೆಗೆ ಹಾಗು ದೇವರಿಗೆ ನಮಸ್ಕಾರ ಮಾಡಿ ಹೊರಟರೆ ಉತ್ತಮ ವ್ಯಾಪಾರ ಆಗುತ್ತದೆ ಎನ್ನುತ್ತಾರೆ, ಮೊದಲ ಬೋಣಿಗೆ ಮಾಡಿದ ಹಣವನ್ನು ಪೆಟ್ಟಿಗೆಗೆಮುಟ್ಟಿಸಿ ಹಣೆಗೆ ಮುಟ್ಟಿಸಿಕೊಂಡು ಜೇಬಿಗೆ ಹಾಕಿಕೊಳ್ಳುವರು, ಇಂತಹ ಕಸುಬಿಗೆ ಸಂಬಂಧಿಸಿದ ಹತ್ತೆಂಟು ನಂಬಿಕೆಗಳು ಗೋಸಂಗಿಗಳಲ್ಲಿ ಕಾಣಬಹುದು.

**ಬೇಟೆ**

ಇವರು ವಾಸ ಮಾಡುವಂಥಹ ಪ್ರದೇಶದ ಸುತ್ತಮುತ್ತಲೂ ಕೆರೆ, ಹಳ್ಳ, ಹೊಳೆಗಳು ಸಾಮನ್ಯವಾಗಿರುತ್ತಿದ್ದವು. ಜೊತೆಗೆ ಕಾಡು ಇರುತ್ತಿತ್ತು ಹೀಗಾಗಿ ತಮ್ಮ ದಿನನಿತ್ಯದ ಆಹಾರಕ್ಕೆ ಮಾರಾಟ ಮಾಡಿ ಹಣ ಸಂಪಾದನೆ ಮಾಡಲಿಕ್ಕೆ ಬಲೆಗಳ ಮುಖಾಂತರ ಗಾಳಗಳ ಮುಖಾಂತರ ಮೀನುಗಳನ್ನು ಹಿಡಿಯುತ್ತಿದ್ದರು.

ಹಕ್ಕಿ ಪಕ್ಷಿಗಳಲ್ಲಿ ಗೌಜಗನಹಕ್ಕಿ, ಪುರಲೆಹಕ್ಕಿ, ನವಿಲು, ಕಾಡುಕೋಳಿ, ನೀರಿನಲ್ಲಿ

ವಾಸ ಮಾಡುವಂತಹ ನೀರುಕೋಳಿ, ಬಾತುಕೋಳಿ, ಬೆಳವ, ಗೊರವಂಕ ಪಕ್ಷಿಗಳನ್ನು ಬೇಟೆಯಾಡುತ್ತಿದ್ದರು.

ಬಲೆಗಳನ್ನು(ಹಾಸಿ) ಕಟ್ಟಿ ಮೊಲಗಳನ್ನು ಬೇಟೆಯಾಡುವರು. ಬೇಟೆ, ಸಣ್ಣ ಪುಟ್ಟ ಆಯುಧಗಳನ್ನು ಉಪಯೋಗಿಸಿ ಮೊಲ, ಉಡ, ಜಿಂಕೆ, ಇವುಗಳ ಬೇಟೆಯನ್ನು ಯಾಡುತ್ತಿದ್ದರು.

ಮೀನುಗಳನ್ನು ಹಿಡಿಯುವ ಸಲುವಾಗಿ ಸಣ್ಣಕಣ್ಣು, ದೊಡ್ಡಕಣ್ಣು, ಮಧ್ಯಮ ಕಣ್ಣುಗಳಿರುವ ಬಲೆಗಳನ್ನು ಉಪಯೋಗಿಸುತ್ತಿದ್ದರು. ಅಂಗಡಿಗಳಿಂದ ಬಲೆ ಹೆಣೆಯುವ ದಾರವನ್ನು ತಂದು ಸ್ವತಃ ತಾವೇ ಬಲೆಗಳನ್ನು ಹೆಣೆಯುತ್ತಿದ್ದರು. ಇನ್ನು ಕೆಲವರು ಗಾಳಗಳನ್ನು ತಂದು ಅದಕ್ಕೆ ದಾರವನ್ನು ಕಟ್ಟಿ ಆಧಾರಕ್ಕೆ ಕೋಲನ್ನು ಕಟ್ಟಿ ಗಾಣವನ್ನು ನೀರಿಗೆ ಬೀಸಿ ಮೀನು ಹಿಡಿಯುತ್ತಿದ್ದರು. ಈಗ ಕಾಲ ಬದಲಾಗಿದೆ. ದಾರಕ್ಕೆ ಬದಲಾಗಿ ತಂಗೂಸನ್ನು ಬಲೆ ಹೆಣೆಯುವುದಕ್ಕೂ, ಗಾಳಕ್ಕೆ ಕಟ್ಟುವುದಕ್ಕೂ ಉಪಯೋಗಿಸುತ್ತಾರೆ. ಕ್ಯಾಟರಬಿಲ್‌ನಿಂದ ಹಕ್ಕಿಗಳನ್ನು ಹೊಡೆಯುತ್ತಿದ್ದರು.

ಮೊಸಳೆಗಳನ್ನು ಹಿಡಿದು ಅದರ ಚರ್ಮವನ್ನು ಮಾರಾಟ ಮಾಡುತ್ತಿದ್ದರು ಮೊಸಳೆಯಿರುವ ಜಾಗವನ್ನು ಮೊದಲೇ ಪತ್ತೆ ಹಚ್ಚಿ ಅದನ್ನು ಆಕರ್ಷಿಸಲು ಮಾಂಸ, ಟಾರ್ಚು, ಮಚ್ಚುಗಳನ್ನು ಜೊತೆಗೆ ಒಯ್ಯುತ್ತಿದ್ದರು,ರಾತ್ರಿಯ ಹೊತ್ತಿನಲ್ಲಿ ಶಿಕಾರಿಗೆ ಹೋದವರು ಮೊಸಳೆ ಹೊರ ಹೊರಡಿಸಲು ಮಾಂಸದ ತುಂಡುಗಳನ್ನು ಹಾಕುತಿದ್ದರು ಮಾಂಸ ತಿನ್ನುವ ಆಸೆಗೆ ಮೊಸಳೆ ಹೊರ ಬಂದ ತಕ್ಷಣ ಆಯ ನೋಡಿ ಅದರ ಮೇಲೆ ಆಕ್ರಮಣ ಮಡುತ್ತಿದ್ದರು ಬೇಟೆಯಲ್ಲಿ ಸಿಕ್ಕಿಬಿದ್ದ ಮೊಸಳೆ ಚರ್ಮವನ್ನು ಸುಲಿದು ನಗರ ಪ್ರದೇಶಗಳ ದಲ್ಲಾಳಿಗಳಿಗೆ ಮಾರಾಟ ಮಾಡುತ್ತಿದ್ದರು. ಮೊಸಳೆ ಬೇಟೆಯಲ್ಲಿ ಗೋಸಂಗಿಗಳ ಪೈಕಿ ಮಗ್ಗರ್ ರಾಜು ಎನ್ನುವಾತ ತುಂಬಾ ಪ್ರಸಿದ್ಧನಾಗಿದ್ದನು

ಕಪ್ಪೆಗಳನ್ನು ಬೇಟೆಯಾಡುವುದರಲ್ಲಿ ಮೀಸೆ ಮಂಜ ಎನ್ನುವಾತ ತುಂಬಾ ನಿಪುಣ. ಕ್ಯಾಟರಬಿಲ್, ಪಂಜರ, ಪಾಚಿಗಳ ಸಹಕಾರದಿಂದ ಬೇಟೆ ಆಡುವುದುಂಟು.

**ವಿವಿಧ ಬಗೆಯ ಬಲೆಗಳು**

೧) ಮೀನಿನ ಬಲೆಗಳು　　೨) ಮೊಲದ ಬಲೆ,

೩) ವಿವಿಧ ಗಾತ್ರದ ಗಾಳಗಳು　　೪) ಚಾಕು

೫) ಗ್ಯಾಸ್　　೬) ಮಚ್ಚು

೭) ಬಿದಿರು ಕೋಲುಗಳು　　೮) ಬೀಸು ಬಲೆ

೯) ಕುಳಿ　　೧೦) ಹಗ್ಗ

ಉರುಳು ಮುಂತಾದವುಗಳನ್ನು ಬೇಟೆಯಾಡಲು ಬಳಸುತ್ತಾರೆ.

**ಕೃಷಿ, ಭೂ ಒಡೆತನ**

ರಾಜ್ಯದ ಹಾಸನ ಹಾಗು ಚಿಕ್ಕಮಗಳೂರು ಜಿಲ್ಲೆ ತರೀಕೆರೆ ತಾಲ್ಲೂಕು ತ್ಯಾಗದ ಕಟ್ಟೆ ಗ್ರಾಮದಲಿರುವ ಗೋಸಂಗಿಗಳು ಚಿಕ್ಕ ಹಿಡುವಳಿದಾರರಾಗಿದ್ದು ತೆಂಗಿನ ತೋಟ

ಮುಂಗೈ ಮಣಿಕಟ್ಟಿನ ಮೇಲುಭಾಗದಲ್ಲಿ,ಹಣೆಯ ಮೇಲೆ ಹಚ್ಚೆಯನ್ನು ಹಾಕಿಸಿಕೊಳ್ಳುವ ಪದ್ಧತಿಯಿದೆ, ಸಾಮಾನ್ಯವಾಗಿ ಹೆಣ್ಣುಮಕ್ಕಳು ಬಾಸಿಂಗ, ಬಾಳೆಕಂಬ, ಆಂಜನೇಯ ಮುಂತಾದವುಗಳನ್ನು ಹಚ್ಚೆ ಹಾಕಿಸಿಕೊಳ್ಳುವರು, ಹಚ್ಚೆ ಹಾಕಿಸಿಕೊಳ್ಳುವುದು ಇವರಲ್ಲಿ ಕಡ್ಡಾಯವಾಗಿದೆ, ಸತ್ತಾಗ ತನ್ನ ಜೊತೆಗೆ ಯಾವ ಆಸ್ತಿಯೂ ಬರುವುದಿಲ್ಲ ಹಚ್ಚೆ ಮಾತ್ರ ತನ್ನ ಜೊತೆಗೆ ಬರುವುದು ಎಂಬ ನಂಬಿಕೆ ಇವರಲ್ಲಿದೆ, ಹಚ್ಚೆಯು ಮುತ್ತೈದೆತನದ ಗುರುತಾಗಿದೆ.

**ರಂಗೋಲಿ**

ಪ್ರತಿಯೊಂದು ದೇವರ ಆಚರಣೆಗಳಲ್ಲಿ ರಂಗೋಲಿಗೆ ಮಹತ್ವದ ಸ್ಥಾನವನ್ನ ಗೋಸಂಗಿಗಳು ಕೊಟ್ಟಿದ್ದಾರೆ, ಒಂದೊಂದು ದೈವದ ಆಚರಣೆಯಲ್ಲಿ ಇಂತಿಂತಹ ರಂಗೋಲಿ ಹಾಕಬೇಕೆನ್ನುವ ನಿಯಮ ಇವರಲ್ಲಿದೆ.

**ಕಸೂತಿ**

ಗೋಸಂಗಿ ಹೆಣ್ಣುಮಕ್ಕಳಿಗೆ ಕಸೂತಿ ಹಾಕುವ ಅಭ್ಯಾಸವು ಕೂಡ ಬಹಳಷ್ಟಿದೆ, ಹಿಂದೆ ಮದುವೆಯಲ್ಲಿ ಬಳಸುವ ಪಗಡಿ, ಮುಸುಕುಗಳಿಗೆ ಕಡ್ಡಾಯವಾಗಿ ಕಸೂತಿಯನ್ನು ಹಾಕಬೇಕಾಗಿದ್ದಿತು, ಇತ್ತೀಚೆಗೆ ಅದು ಮಾಯವಾಗಿದೆ, ಈಗೀಗ ಗೋಸಂಗಿ ಯುವತಿ ಯರು ಬಾಗಿಲು ತೋರಣಗಳಿಗೆ, ಹಣ್ಣು ಕಾಯಿ ತಟ್ಟೆಯ ಮೇಲೆ ಮುಚ್ಚುವ ಚಾಕಗಳಿಗೆ, ಸೀರೆ ಬಟ್ಟೆಗಳು ಮುಂತಾದವುಗಳ ಮೇಲೆ ಕಸೂತಿ ಹೆಣೆಯುವುದನ್ನು ರೂಢಿಸಿ ಕೊಂಡಿದ್ದಾರೆ.

## ೧೦

## ಸಮಸ್ಯೆ ಸಂಘಟನೆ ಪರಿಹಾರ

**ಗೋ**ಸಂಗಿ ಸಮುದಾಯವು ಅತಿ ಮುಖ್ಯವಾಗಿ ಅನುಭವಿಸುತ್ತಿರುವ ಜ್ವಲಂತ ಸಮಸ್ಯೆಯಂದರೆ ವಸತಿಗೆ ಸರಿಯಾದ ನೆಲೆ ಇಲ್ಲದೆ ಇರುವುದು, ತಮ್ಮ ನಿಜವಾದ ಜಾತಿಯಾವುದು ಎಂಬ ಕುರಿತೇ ಬಹುಪಾಲು ಗೋಸಂಗಿಗಳಿಗೆ ಗೊಂದಲವಿದೆ, ಗೋಸಂಗಿಗಳು ಎಷ್ಟೋ ಕಡೆ ತಮ್ಮ ನಿಜವಾದ ಜಾತಿ ಹೇಳಿಕೊಳ್ಳಲು ಸಾದ್ಯವಾಗದ ಅಸಹಾಯಕ ಸ್ಥಿತಿಯಲ್ಲಿದ್ದಾರೆ, ಇಂದು ಇವರು ತಮ್ಮನ್ನು ಗೊಸಾವಿ, ಸಿಂಗ್, ಅತ್ತರ ವಾಲ, ಗಂಧೆಣ್ಣೆಯವರು, ಗೋಸಾಯಿಗಳು, ಮರಾಠ, ಗುಜರಾತಿ ಮುಂತಾದ ಹೆಸರುಗಳ ಮೂಲಕ ಗುರುತಿಸಿಕೊಳ್ಳುತ್ತಿದ್ದಾರೆ, ಕರ್ನಾಟಕದ ಕೆಲವು ಭಾಗಗಳಲ್ಲೇನೊ ಪರಿಶಿಷ್ಟ ಜಾತಿ ಪ್ರಮಾಣ ಪತ್ರ ಇವರಿಗೆ ದೊರೆಯುತ್ತಿದೆ, ಆದರೆ ಬಹಳಷ್ಟು ಕಡೆ ಜಾತಿ ಪ್ರಮಾಣ ಪತ್ರದ ಸೌಲಭ್ಯವೂ ದೊರೆಯುತ್ತಿಲ್ಲ, ಜಾತಿ ಸಮಸ್ಯೆ ಅತಿ ಜ್ವಲಂತ ಸಮಸ್ಯೆಯಾಗಿ ಈ ಸಮುದಾಯವನ್ನು ಕಾಡುತ್ತಿದೆ, ತೀರಾ ಅಲ್ಪ ಸಂಖ್ಯಾತವಾದ ಗೋಸಂಗಿ ಸಮುದಾಯಕ್ಕೆ ಸ್ವತಂತ್ರ ಬಂದು ೬೦ ವರ್ಷಗಳಾದರು ರಾಜಕೀಯವಾಗಿ ಒಂದೇ ಒಂದು ಚಿಕ್ಕ ಸ್ಥಾನವನ್ನು ವಹಿಸಿಕೊಳ್ಳುವುದು ಸಾದ್ಯವಾಗುತ್ತಿಲ್ಲ, ಸಮುದಾಯವನ್ನು ಕೀಳು ಭಾವನೆಯಿಂದ ಕಂಡು ದೂರತಳ್ಳುವವರೇ ಜಾಸ್ತಿ, ಮಕ್ಕಳಿಗೆ ಶಾಲೆಗಳಿಗೆ ಸೇರಿಸಲು ಜಾತಿ ಸರ್ಟಿಫೀಕೇಟ್ ಕೇಳಲು ಅಧಿಕಾರಿಗಳ ಬಳಿ ಹೋದರೆ **ಗೋಸಂಗಿ ಜಾತಿ ಎಲ್ಲದ** ಅದರ ಹೆಸರೇ ನಾವು ಕೇಳಿಲ್ಲವೆಂದು ಹೇಳಿ ಸರ್ಟಿಫೀಕೇಟ್ ಕೊಡದೆ ಕಳುಹಿಸಿದ ಅಧಿಕಾರಿಗಳೂ ಉಂಟು, ಇಂದಿಗೂ ಇವರಲ್ಲಿ ಎಷ್ಟೋ ಕುಟುಂಬಗಳಿಗೆ ರೇಶನ್ ಕಾರ್ಡ ಇಲ್ಲ, ಮೂಲಭೂತ ಸೌಲಭ್ಯದ ಕೊರತೆ ಇದೆ, ಮತದಾರರ ಪಟ್ಟಿಗೆ ಸೇರಿದವರ ಪ್ರಮಾಣವೂ ಇವರಲ್ಲಿ ಕಡಿಮೆಯಂದೇ ಹೇಳಬಹುದು, ಸರ್ಕಾರಿ ಜಾಗದಲ್ಲಿ ಗುಡಾರಗಳನ್ನು ಹಾಕಿಕೊಂಡು ಊರ ಹೊರಗೆ ವಾಸ ಮಾಡುವ ಇವರ ಮೇಲೆ ಬಲಾಢ್ಯರು ದೌರ್ಜನ್ಯ ಮಾಡಿ ಗುಡಾರಗಳನ್ನು ಕಿತ್ತು ಬಿಸಾಕುವಂಥ ಹೀನಾಯವಾದ ಕೆಲಸ ಮಾಡಿದ ಉದಾಹರಣೆಗಳೂ ಉಂಟು.

ಬಹುತೇಕ ಅಲ್ಪ ಸಂಖ್ಯಾತ ಕೆಳ ವರ್ಗಗಳಂತೆ ಗೋಸಂಗಿ ಸಮುದಾಯವು ಸಹ ಸಾಯಲೂ ಆಗದೆ ಬದಕುಲೂ ಆಗದೆ ಜೀವಂತ ಹೆಣವಾಗಿ ಯಾರಿಗೂ

ಜೀವಿಸುತ್ತಿದೆ. ಇಂತಹ ಹತ್ತೆಂಟು ಸಮಸ್ಯೆಗಳ ಸುಳಿಯಲ್ಲಿ ಸಿಕ್ಕು ಒದ್ದಾಡುತ್ತಿರುವ ಗೋಸಂಗಿಗಳಿಗೆ ಯಾವಾಗ, ಯಾರಿಂದ, ಹೇಗೆ ಬಿಡುಗಡೆ ದೊರಕುತ್ತದೋ ಕಾದು ನೋಡಬೇಕಾಗಿದೆ.

**ಸಂಘಟನೆಗಳು**

ಗೋಸಂಗಿಗಳು ತಾವು ಯಾವ ಯಾವ ಪರಿಸರದಲ್ಲಿ ಯಾವ್ಯಾಯ ಊರುಗಳಲ್ಲಿ ವಾಸ ಮಾಡುತ್ತಿದ್ದರೋ ಆಯಾ ಪರಿಸರಕ್ಕೆ ಅನುಗುಣವಾಗಿ ಹೊಂದಿಕೊಂಡು ಜೀವನ ನಡೆಸುತ್ತದೆ. ಗೋಸಂಗಿ ಸಮುದಾಯದವರು ಕರ್ನಾಟಕದ ಯಾವ್ಯಾವ ಕಡೆ ನೆಲೆಸಿದ್ದಾರೆ ಎಂದು ತಿಳಿಯುವುದೇ ತುಂಬಾ ಕಷ್ಟದ ಕೆಲಸವಾಗಿತ್ತು, ಪ್ರಾದೇಶಿಕವಾಗಿ ತುಂಬಾ ದೂರದಲ್ಲಿರುವ ಗೋಸಂಗಿಗಳ ಮಧ್ಯ ಸಂಬಂಧಗಳು ಏರ್ಪಡುವುದೇ ಕಷ್ಟ ಸಾಧ್ಯದ ವಿಚಾರವಾಗಿದ್ದಿತು, ಸುಮಾರು ೩೦ ವರ್ಷಗಳಿಂದೀಚೆಗೆ ಇವರು ಒಂದು ಕಡೆ ನೆಲೆ ನಿಲ್ಲತೊಡಗಿದ ಮೇಲೆ ಆರ್ಥಿಕವಾಗಿ ಸ್ವಲ್ಪ ಅನುಕೂಲ ಹೊದಿದ ಕೆಲವು ಕುಟುಂಬಗಳಲ್ಲಿ ದೂರ ದೂರದ ಸಂಬಂಧಗಳು ಏರ್ಪಡತೊಡಗಿದವು, ಇವರಲ್ಲಿ ಇಂದಿಗೂ ಶಿಕ್ಷಣದ ಕೊರತೆಯಿದೆ, ತಾವೆಲ್ಲ ಒಗ್ಗಟ್ಟಾಗಿ ಇರಬೇಕು ತಮ್ಮದೇ ಆದ ಸಂಘಟನೆ ರೂಪಿಸಿಕೊಳ್ಳಬೇಕು, ಇದರಿಂದ ದೊರೆಯುವ ಪ್ರತಿಫಲವನ್ನು ಪಡೆಯಬೇಕು ಎಂಬ ಕಲ್ಪನೆಯೇ ಇರಲಿಲ್ಲ ಎಂದು ಹೇಳಬಹುದು.

ಹೆಚ್. ನಾಗೇಶ್ ವಾಡೇಲ್ ಎನ್ನುವವರು ಗೋಸಂಗಿ ಸಮುದಾಯದಲ್ಲಿಯೇ ಮೊದಲ ಸರ್ಕಾರಿ ನೌಕರರೆನ್ನಬಹುದು, ಇವರು ಶಿಕ್ಷಕರಾಗಿ ಸರ್ಕಾರಿ ಕೆಲಸವನ್ನು ಮಾಡುತ್ತಿದ್ದರು. ಇವರು ತಮ್ಮ ಸಮುದಾಯದ ಶುಭ, ಅಶುಭ ಕಾರ್ಯಗಳಿಗೆ ಬೇರೆ ಊರುಗಳಿಗೆ ಹೋದಾಗ, ನಾವು ಗೋಸಂಗಿಗಳು, ನಾವು ಪರಿಶಿಷ್ಟ ಜಾತಿಗೆ ಸೇರಿದವರು, ಪರಿಶಿಷ್ಟ ಜಾತಿಗೆ ದೊರೆಯುವ ಸೌಲಭ್ಯಗಳನ್ನು ಪಡೆದು ತಮ್ಮ ಸಮುದಾಯದ ಮಕ್ಕಳು ಉನ್ನತ ಶಿಕ್ಷಣ ಪಡೆಯುವಂತಾಗಬೇಕು, ಒಂದೇ ಕಡೆ ನೆಲೆನಿಂತು ಉತ್ತಮ ಜೀವನವನ್ನು ತಮ್ಮವರು ನಡೆಸುವಂತಾಗಬೇಕು ಎಂದು ಈ ಸಮುದಾಯದ ಜನಕ್ಕೆ ಮನವರಿಕೆ ಮಾಡುತ್ತಿದ್ದರು. ಹಾಗೂ ಓದುವಂತಹ ಮಕ್ಕಳಿಗೆ ಪರಿಶಿಷ್ಟ ಜಾತಿ ಪ್ರಮಾಣ ಪತ್ರವನ್ನು ಕೊಡಿಸುವ ಯತ್ನ ಮಾಡುತ್ತಿದ್ದರು. ಆದರೆ ಇವರಿಗೆ ಸಮುದಾಯಕ್ಕೆ ಅವಶ್ಯಕವಾದ ಸಂಘಟನೆ ಕಟ್ಟಲು ಸಾಧ್ಯವಾಗದೇ ಹೋಯಿತು, ಸಮುದಾಯದ ಬೆಳವಣಿಗೆಗೆ ಅತೀ ಅವಶ್ಯಕವಾದ ಸಂಘಟನೆ ಕಟ್ಟಬೇಕೆನ್ನುವ ಆಸೆ ೨೦೦೦ದ ಇಸವಿಯಲ್ಲಿ ಸಾಧ್ಯವಾಯಿತು.

ರಾಣೀಬೆನ್ನೂರು ವಾಸಿಯಾದ ಆನಂದಪ್ಪ ದಿಲ್ಲಿವಾಲಎಂಬುವವರು ತಮ್ಮ ಮೂಲ ಗ್ರಾಮವಾದ ರಾಣೀಬೆನ್ನೂರು ತಾಲ್ಲೂಕು ಮಾಗನೂರು ಎಂಬ ಗ್ರಾಮದಲ್ಲಿ ಕಾಳಿಕ ದೇವಿ ಪ್ರತಿಮೆ ಪ್ರತಿಷ್ಠಾಪನೆ ಮಾಡಿಸಿದರು, ಆ ಸಂದರ್ಭದಲ್ಲಿ ಈ ಕಾರ್ಯಕ್ಕೆ ಆಗಮಿಸಿದ ಶಿವಮೊಗ್ಗ ನಗರದ ಶ್ರೀ ಎಸ್. ಅಪ್ಪಾಜಿ ಬಿನ್ ಶಿವರಾಮಪ್ಪ ಸಿಂದೆ ಮತ್ತು ಶ್ರೀ ಕೆ. ಸುರೇಶ್ ಬಿನ್ ಕೃಷ್ಣಪ್ಪ ಚಾವಡೆ, ಮುಂತಾದ ಬೇರೆ ಬೇರೆ ಕಡೆ ಜನ ಕಾರ್ಯಕ್ರಮಕ್ಕೆ ಹೋಗಿದ್ದರು.

ಶ್ರೀ ಮಹಾತಾಯಿಯ ಪ್ರತಿಷ್ಠಾಪನೆ ಪೂಜೆಯನ್ನು ಬಹಳ ವಿಜೃಂಭಣೆಯಿಂದ ಮಾಡಲಾಗಿತ್ತು ಪೂಜೆಯಲ್ಲ ಮುಗಿದ ನಂತರ ತೀರ್ಥ ಪ್ರಸಾದ ಆದ ಬಳಿಕ ಊಟವು ಆಯ್ತು. ಊಟ ಮುಗಿಸಿ ಎಲ್ಲರೂ ಅಲ್ಲಲ್ಲಿ ಗುಂಪು ಗುಂಪಾಗಿ ಮಾತನಾಡುತ್ತ ಸಂತೋಷವಾಗಿ ಕಾಲಕಳಿಯುತ್ತಿದ್ದರು. ಈ ಸಂದರ್ಭದಲ್ಲಿ ಶ್ರೀ ಆನಂದಪ್ಪ ದಿಲ್ಲಿವಾಲ ಇವರ ಮಗನಾದ ಶ್ರೀ ಎ ಸುರೇಶ್ ಮತ್ತು ಅವರ ಸಹೋದರರು ಸೇರಿದ ಸಮುದಾಯ ದವರ ಮುಂದೆ ಕೆಲವು ಪ್ರಶ್ನೆಗಳನ್ನಿರಿಸಿದರು, ಈದೇವಿ ನಮ್ಮ ಸಮುದಾಯಕ್ಕೆ ತಕ್ಕ ಮಟ್ಟಿಗೆ ಅನುಕೂಲ ಮಾಡಿರುವಳು, ಹೊಟ್ಟೆ ಬಟ್ಟೆಗೆ, ಗೌರವಕ್ಕೆ ಸ್ಥಾನ ಮಾನಗಳಿಗೆ ಕೊರತೆಯಿಲ್ಲದಂತೆ ಕಾಪಾಡಿಕೊಂಡು ಬರುತ್ತಿದ್ದಾಳೆ, ಆದರೆ ಒಂದೇ ಒಂದು ಕೊರತೆ ನಮ್ಮಲ್ಲಿದೆ, ನಮ್ಮ ಈ ಸಮುದಾಯಕ್ಕೆ ಒಂದೊಂದು ಕಡೆ ಒಂದೊಂದು ಹೆಸರಿನಲ್ಲಿ ಕರೆಯಲಾಗುತ್ತಿದೆ. ಗೋಸಂಗಿ, ಗೋಸಾಯಿ, ಗ್ವಾಸರು, ಸಿಂಗ್, ಮರಾಠ, ಅತ್ತರವಾಲ, ಗುಜರಾತಿ ಹೀಗೆ ಅನೇಕ ಹೆಸರುಗಳಿಂದ ಕರೆಯಲಾಗುತ್ತಿದೆ, ನಮಗೆ ನಮ್ಮ ನಿಜವಾದ ಜಾತಿ ಯಾವುದು ಎಂಬುದೇ ಗೊತ್ತಾಗುತ್ತಿಲ್ಲ. ಏನಾದರೂ ಮಾಡಿ ಛಿದ್ರಛಿದ್ರವಾಗಿರುವ ನಮ್ಮ ಸಮುದಾಯದವರು ಒಂದೇ ಹೆಸರಿನಿಂದ ಗುರುತಿಸಿಕೊಳ್ಳುವಂತೆ ಸಂಘಟನೆ ಮಾಡಿ ನಮ್ಮದೇ ಆಗಿರುವಂತಹ ಸಮಾಜವನ್ನು ನಿರ್ಮಾಣ ಮಾಡಬೇಕು ಈ ಕೆಲಸವನ್ನು ಪ್ರಜ್ಞಾವಂತರೂ,ಹಿರಿಯರು ಸೇರಿ ಮಾಡಬೇಕು ಎಂದು ತಿಳಿಸಿದರು, ಕೊನೆಗೆ ಈ ಜವಬ್ದಾರಿಯನ್ನು ಯಾರಿಗೆ ವಹಿಸುವುದು ಎನ್ನುವ ಪ್ರಶ್ನೆ ಬಂದಾಗ ಶಿಕ್ಷಕರಾಗಿ ಕಾರ್ಯ ನಿರ್ವಹಿಸಿದ ಸಮುದಾಯದ ಅಪ್ಪಾಜಿಯವರು ವಹಿಸಿಕೊಳ್ಳಲಿ ಎಂದು ಸೇರಿದ ಜನ ಸರ್ವಾನುಮತದಿಂದ ಒಪ್ಪಿಗೆ ಸೂಚಿಸಿದರು,

ಆದರು ಸಹ ಸಂಘಟನೆ ಹುಟ್ಟು ಹಾಕುವುದು ಅಷ್ಟೇನೂ ಸುಲಭದ ಕೆಲಸ ವಾಗಿರಲಿಲ್ಲ, ಆದರೆ ಸಮುದಾಯದವರ ಒತ್ತಾಯದ ಮೇರೆಗೆ ದಿನಾಂಕ ೦೬ ೦೧-೨೦೦೨ ರಂದು ಪ್ರಥಮ ಸಭೆ ಸೇರಿಸಲಾಯಿತು, ಅಂದಿನ ಸಭೆಯ ಅಧ್ಯಕ್ಷತೆಯನ್ನು ಆನಂದಪ್ಪ ದಿಲ್ಲಿವಾಲ ಇವರು ವಹಿಸಿದ್ದರು, ಆ ಸಭೆಗೆ ಸಮುದಾಯದ ಅನೇಕ ಗಣ್ಯ ವ್ಯಕ್ತಿಗಳು ಹಿರಿಯರು, ಅನುಭವಿಗಳು ಸೇರಿದ್ದರು. ಅಂದು ಸಮುದಾಯ ದೊಳಗೆ ಸಂಘಟನೆ ಕಟ್ಟುವ ಕುರಿತು ಸೇರಿದವರೆಲ್ಲರೂ ತುಂಬಾ ಆಸಕ್ತಿ ತೋರಿಸಿದರು, ಮುಂದೆ ಹೀಗೆ ನಾಲ್ಕಾರು ಬಾರಿ ಸಭೆಗಳನ್ನು ಮಾಡಲಾಯ್ತು, ಕೊನೆಯಲ್ಲಿ ಶಿವಮೊಗ್ಗದ ಪುರದಾಳು ಕಾಡಿನಲ್ಲಿ ದೊಡ್ಡ ಕೆರೆಯಿದೆ. ದಡದ (ಕಲ್ಲೆವೊಟ್ಟು ಡ್ಯಾಂ) ಆ ಬಯಲು ಪ್ರದೇಶದಲ್ಲಿ ಸಭೆ ಸೇರಿ ಸುಧೀರ್ಘ ಚರ್ಚೆ ನಡೆಸಿ ಕೊನೆ ತೀರ್ಮಾನಕ್ಕೆ ಅಂದಿನ ಸಭೆ ಒಪ್ಪಿಗೆ ಕೊಟ್ಟಿತು. ನಮ್ಮ ಸಮುದಾಯಕ್ಕೆ ಯಾರೇ ಏನೇ ಹೆಸರಿನ ಜಾತಿಯಂದು ಕರೆದರು ಅವು ಯಾವು ನಮ್ಮ ಜಾತಿಯ ಹೆಸರುಗಳಲ್ಲ, ನಮ್ಮ ಜಾತಿ ಕೇವಲ ಗೋಸಂಗಿ ಎಂದು ತೀರ್ಮಾನಿಸಲಾಯಿತು, ಈ ಹೆಸರಿನಲ್ಲಿ ರಾಜ್ಯ ಮಟ್ಟದ ಒಂದು ಸಂಘಟನೆ ನಿರ್ಮಾಣ ಮಾಡಬೇಕು ಎಂದು ತೀರ್ಮಾನಿಸಿ ಅಖಿಲ ಕರ್ನಾಟಕ ಗೋಸಂಗಿ (ಪಜಾ) ಸಮಾಜ ಎಂಬ ಹೆಸರಿನಲ್ಲಿ ನೋಂದಾಣಿ ಮಾಡಿಸಬೇಕು, ಈ

ಸಂಘಟನೆಯ ಅಧ್ಯಕ್ಷರನ್ನಾಗಿ ಶ್ರೀ ಎಸ್ ಅಪ್ಪಾಜಿಯವರನ್ನು ನೇಮಕ ಮಾಡಲಾಯಿತು. ಹಾಗೆ ಕಾರ್ಯದರ್ಶಿಯಾಗಿ ಚಾವಡೆ ಲೋಕೇಶರನ್ನು ಸರ್ವಾನುಮತದಿಂದ ಆಯ್ಕೆ ಮಾಡಲಾಯಿತು. ೧೮.೦೨.೨೦೦೨ ರಂದು ಅಖಿಲ ಕರ್ನಾಟಕ ಗೋಸಂಗಿ (ಪಜಾ) ರಿ; ಎಂದು ಸಂಘವನ್ನು ನೋಂದಣಿ ಮಾಡಿಸಲಾಯ್ತು, ಸಂಘವನ್ನು ನೋಂದಣಿ ಮಾಡಿಸಿ ಸುಮ್ಮನೆ ಕುಳಿತರೆ ಸಂಘಟನೆ ಆಗುವುದಿಲ್ಲವೆಂದು ಒಂದು ಟೀಂ ಮಾಡಿ ಕೊಂಡು ರಾಜ್ಯಾದ್ಯಂತ ಪ್ರವಾಸ ಕೈಗೊಂಡು ತಮ್ಮ ಸಮುದಾಯದವರು ಎಲ್ಲೆಲ್ಲಿ ಇರುವರು ಎಂಬ ಮಾಹಿತಿ ಕಲೆಹಾಕಲಾಯಿತು, ಹಾಗೆ ಸಮುದಾಯದ ಪ್ರತಿಯೊಂದು ಕುಟುಂಬದಿಂದಲೂ ಸಂಘದ ಸದಸ್ಯತ್ವ ಮಾಡಲಾಯಿತು,

ದಿನಾಂಕ ೦೧.೧೧.೨೦೦೨ ರಂದು ಈ ಸಮಾಜದ ಅಧಿವೇಶನ ಮತ್ತು ಉದ್ಘಾಟನೆ ಸಮಾರಂಭವನ್ನು ಶಿವಮೊಗ್ಗದಲ್ಲಿ ಮಾಡಲಾಯಿತು, ಈ ಸಮಾವೇಶಕ್ಕೆ ಸಮುದಾಯದವರಿಂದ ಒಳ್ಳೆಯ ಪ್ರತಿಕ್ರಿಯೆ ಬಂದಿತು.

**ಸಾಮಾಜಿಕ ಸ್ಥಿತಿಗತಿ**

ಗೋಸಂಗಿಗಳು ಮೂಲತಃ ಅಲೆಮಾರಿಗಳು, ಇವರಿಗೆ ತಮ್ಮ ದಿನನಿತ್ಯದ ಬದುಕೇ ದೊಡ್ಡದಾಗಿತ್ತು, ಹೀಗಾಗಿ ಬೇರೆ ಯಾವುದರ ಕುರಿತೂ ಚಿಂತೆಯನ್ನೇ ಮಾಡುತ್ತಿರಲಿಲ್ಲ. ಅತೀ ಹಿಂದುಳಿದ ಇವರು ಸಾಮಾಜಿಕವಾಗಿ ಮುಂದುವರೆಯಲು ಅಸಾಧ್ಯವಾಗಿತ್ತು, ಊರ ಹೊರಭಾಗದಲ್ಲಿ ಗುಂಪು ಗುಂಪಾಗಿ ಗುಡಾರಗಳನ್ನು ನಿರ್ಮಿಸಿಕೊಳ್ಳುತ್ತಿದ್ದ ಇವರಿಗೆ ಅಸ್ಪೃಶ್ಯತೆ ಅಷ್ಟೇನೂ ಕಾಡದೇಯಿದ್ದರೂ ಬೇರೆ ರೀತಿಯ ಸಮಸ್ಯೆಗಳು ಇವರನ್ನು ಕಾಡುತ್ತಿದ್ದವು.

**ಆರ್ಥಿಕ ಸ್ಥಿತಿಗತಿ**

ಸಾಮಾಜಿಕವಾಗಿಯೇ ಹಿಂದುಳಿದಿರುವ ಈ ಸಮುದಾಯ ಆರ್ಥಿಕವಾಗಿ ಮುಂದು ವರೆಯುವುದು ಅಸಾಧ್ಯದ ಕೆಲಸವಾಗಿತ್ತು. ಆಹಾರಕ್ಕಾಗಿ ಪ್ರಾಣಿ, ಪಕ್ಷಿ, ಮೀನುಗಳನ್ನು ಹಿಡಿಯುತ್ತಿದ್ದರು, ಕೈ ಖರ್ಚಿಗೆ ಸಾಕಾಗುವಷ್ಟು ಹಣ, ದವಸ ಧಾನ್ಯಗಳು ನಾಟಿ ಔಷಧಿಗಳಿಂದ ದೊರೆಯುತ್ತಿತ್ತು, ಆದರೆ ಅರಣ್ಯ ನೀತಿಯಿಂದಾಗಿ ಕಾಡು ಇವರಿಂದ ದೂರವಾಯ್ತು, ಅನಿವಾರ್ಯವಾಗಿ ಇತರ ಕೂಲಿ ಕೆಲಸಕ್ಕೋ ಮತ್ತಾವುದೋ ದುಡಿಮೆಗೆ ತಮ್ಮನ್ನು ತೊಡಗಿಸಿಕೊಳ್ಳಲೇಬೇಕಾದ ಸ್ಥಿತಿ ಉಂಟಾಯಿತು. ಬಡತನದೊಂದಿಗೆ ಕುಡಿತದಂತಹ ಹವ್ಯಾಸ ಇವರನ್ನು ಇನ್ನೂ ಅಧೋಗತಿಗೆ ತಳ್ಳಿತು ಎಂದರೆ ತಪ್ಪಾಗಲಾರದು.

**ಶೈಕ್ಷಣಿಕ ಸ್ಥಿತಿಗತಿ**

ಅಲೆಮಾರಿ ಜೀವನ ನಡೆಸುವ ಇವರು ಒಂದು ಕಡೆ ೧೫ ದಿನಗಳು ಅಥಾವ ಒಂದು ತಿಂಗಳು ಇದ್ದರೆ ಹೆಚ್ಚು,

ಸಾಮಾನ್ಯವಾಗಿ ಇವರಲ್ಲಿ ವಿದ್ಯಾವಂತರೇ ಆಗಿನ ಕಾಲದಲ್ಲಿ ಇದ್ದಿರಲಿಲ್ಲ, ಮಕ್ಕಳು ಸ್ವಲ್ಪ ಬೆಳೆದು ದೊಡ್ಡವರಾದರೆ ಸಾಕು, ಅವರಿಗೂ ಸಹ ತಾವು ಮಾಡುತ್ತಿದ್ದ ಕಸುಬುಗಳನ್ನು

ಕಲಿಸುತ್ತಿದ್ದರು, ಹೀಗಾಗಿ ಮಕ್ಕಳನ್ನು ಶಾಲೆಗೆ ಕಳಿಸುವುದೇ ಇವರಲ್ಲಿ ತುಂಬಾ ಅಪರೂಪವಾಗಿತ್ತು. ಇವರು ವಾಸ ಮಾಡುವಂತಹ ಸ್ಥಳಗಳೆಲ್ಲವು ಊರಿನಿಂದ ಹೊರಗೇ ಇರುತ್ತಿದ್ದವು. ಇಂಥಹ ಪಂಗಡಗಳ ಜನರಿಗೆ ವಿದ್ಯಾಭ್ಯಾಸದ ಅವಶ್ಯಕತೆಯಿದೆ ಇವರಿಗೂ ವಿದ್ಯಾಭ್ಯಾಸವನ್ನು ದೊರಕಿಸಿಕೊಡಬೇಕೆಂಬ ಹಂಬಲ ಮೇಲ್ವರ್ಗದ ಅಧಿಕಾರಿಗಳಿಗಾಗಲಿ, ಸರ್ಕಾರಕ್ಕಾಗಲಿ ಇರಲಿಲ್ಲವೆನ್ನಬಹುದು, ಈ ಎಲ್ಲಾ ಕಾರಣಗಳಿಂದ ಈ ಸಮುದಾಯ ಶೈಕ್ಷಣಿಕವಾಗಿ ಹಿಂದುಳಿಯಲು ಕಾರಣವಾಯಿತು. ಆದರೆ ಇತ್ತೀಚಿನ ದಿನಗಳಲ್ಲಿ ಈ ಸಮುದಾಯ ಶೈಕ್ಷಣಿಕವಾಗಿ ತುಂಬಾ ಬದಲಾವಣೆ ಕಾಣುತ್ತಿದೆ ಎನ್ನುವುದಕ್ಕೆ ಈ ಕೆಳಗಿನ ಅಂಕಿ ಅಂಶಗಳನ್ನು ನೋಡಬಹುದು.

ನಿಂತ ಕಡೆ ನೆಲೆನಿಲ್ಲದ ಅಲೆಮಾರಿಗಳಿಗೆ ಶಾಲೆ ಮತ್ತು ಓದು ಎನ್ನುವುದು ತುಂಬಾ ದೂರವಾದ ವಿಚಾರ ಕರ್ನಾಟಕದ ಸರಾಸರಿ ಸಾಕ್ಷರರಿಗೆ ಹೋಲಿಸಿದರೆ ಅಲೆಮಾರಿಗಳ ಸಾಕ್ಷರತೆ ಪ್ರಮಾಣ ತುಂಬಾ ಕಡಿಮೆಯಾಗಿದೆ.

ಗೋಸಂಗಿಗಳ ಸಾಕ್ಷರತೆ ಪ್ರಮಾಣದ ಕುರಿತು ೧೯೬೧ರಿಂದ ೨೦೦೧ರವರೆಗೂ ದೊರೆತ ಮಾಹಿತಿಯನ್ನು ಹಸನ್‌ರವರು ಎನ್‌ಸೈಕ್ಲೋಪಿಡಿಯಾ ಆಫ್ ಸೆಡ್ಯೂಲ್ಡ್ ಕಾಸ್ಟ್ ಇನ್ ಇಂಡಿಯಾ ಕೃತಿಯಲ್ಲಿ ಕೊಟ್ಟಿದ್ದಾರೆಯ

೧೯೬೧ರ ಗಣತಿಯಲ್ಲಿ ಒಬ್ಬೆ ಒಬ್ಬ ಸಾಕ್ಷರ ದೊರೆತಿಲ್ಲ. ಆದರೆ ೧೯೭೧ರ ಗಣತಿಯಲ್ಲಿ ೬ ಪುರುಷ ಹಾಗೂ ೭ ಮಹಿಳಾ ನಿರಕ್ಷರಿಗಳು ಕಂಡುಬಂದಿದ್ದಾರೆ. ಈ ಒಂದು ದಶಕದಲ್ಲಿ ಒಬ್ಬ ಸಾಕ್ಷರನೂ ಈ ಸಮುದಾಯದಲ್ಲಿ ಕಂಡುಬಂದಿರುವುದಿಲ್ಲ.

೧೯೮೧ರ ಗಣತಿಯಲ್ಲಿ ೩೩೭ ಪುರುಷರು ಹಾಗೂ ೩೪೨ ಮಹಿಳೆಯರು ನಿರಕ್ಷರಿಗಳ ಪಟ್ಟಿಯಲ್ಲಿದ್ದಾರೆ. ಅಸಂಪ್ರದಾಯಕ ಶಿಕ್ಷಣದ ಮೂಲಕ ಸಾಕ್ಷರರಾದವರು ಕೇವಲ ೧೪ ಜನ ಪುರುಷರು ೬ ಜನ ಮಹಿಳೆಯರು. ಮೆಟ್ರಿಕ್ಯೂಲೇಷನ್ ಹಾಗೂ ಮಹಿಳೆಯರಲ್ಲಿ ೧೬ ಜನ ಕಂಡುಬಂದಿದ್ದಾರೆ. ಮೆಟ್ರಿಕ್ಯೂಲೇಷನ್‌ಗಿಂತ ಹೆಚ್ಚಿನ ವಿದ್ಯಾಭ್ಯಾಸ ನಡೆಸಿದವರು ಕೇವಲ ಇಬ್ಬರು ಪುರುಷರಾಗಿದ್ದಾರೆ.

೧೯೯೧ರ ಗಣತಿಯಲ್ಲಿ ೭೦೬ ಪುರುಷರು ೭೪೪ ಮಹಿಳೆಯರು ನಿರಕ್ಷರರ ಪಟ್ಟಿಯಲ್ಲಿದ್ದಾರೆ. ಅಸಂಪ್ರದಾಯಕ ಶಿಕ್ಷಣದ ಮೂಲಕ ಸಾಕ್ಷರರಾದವರಲ್ಲಿ ಪುರುಷರು ೭೮ ಹಾಗೂ ಮಹಿಳೆಯರು ೪೮ ಎಂದು ನಮೂದಾಗಿದೆ. ಮೆಟ್ರಿಕ್ಯುಲೇಷನ್ ಹಾಗೂ ಅದಕ್ಕಿಂತ ಕೆಳಹಂತದ ಶಿಕ್ಷಣ ಪಡೆದವರಲ್ಲಿ ಪುರುಷರು ೧೮೬ ಹಾಗೂ ಮಹಿಳೆಯರು ೭೫ ಎಂದು ತಿಳಿದುಬರುತ್ತದೆ. ಮೆಟ್ರಿಕ್ಯೂಲೇಷನ್‌ಗಿಂತ ಹೆಚ್ಚಿನ ವಿದ್ಯಾಭ್ಯಾಸ ನಡೆಸಿದವರಲ್ಲಿ ಪುರುಷರು ೨೮ ಹಾಗೂ ಮಹಿಳೆಯರು ಕೇವಲ ೬ ಎಂದು ತಿಳಿದುಬರುತ್ತದೆ.

೨೦೦೧ರ ಗಣತಿಯಲ್ಲಿ ನಿರಕ್ಷರಿಗಳಲ್ಲಿ ಪುರುಷರು ೪೪೯ ಹಾಗೂ ಮಹಿಳೆಯರು ೫೬೭ ಎಂದಿದ್ದು ಅಸಂಪ್ರದಾಯಕ ಶಿಕ್ಷಣದ ಮೂಲಕ ಸಾಕ್ಷರರಾದವರು ಪುರುಷರು ೮ ಹಾಗೂ ಮಹಿಳೆಯರು ೧೦ ಜನ ಎಂದಿದೆ. ಮೆಟ್ರಿಕ್ಯೂಲೇಷನ್ ಹಾಗೂ

ಅದಕ್ಕಿಂತ ಕೆಳಹಂತದ ಶಿಕ್ಷಣ ಪಡೆದವರಲ್ಲಿ ಪುರುಷರು ೩೫೯ ರಷ್ಟಿದ್ದರೆ ಮಹಿಳೆಯರು ೨೧೦ ರಷ್ಟಿದ್ದಾರೆ. ಮೆಟ್ರಿಕ್ಯುಲೇಷನ್‌ಗಿಂತ ಹೆಚ್ಚಿನ ವಿದ್ಯಾಭ್ಯಾಸ ಹೊಂದಿದವರಲ್ಲಿ ಪುರುಷರು ೨೧ ಹಾಗೂ ೧೦ ಮಹಿಳೆಯರು ಎಂದು ತಿಳಿದುಬರುತ್ತದೆ. ಅನುಬಂಧ ಗಮನಿಸಿ ನಂದೂರಾಮ್, ೨೮೩

೨೦೦೭ರಲ್ಲಿ ಈ ಅಧ್ಯಯನಕ್ಕಾಗಿಯೇ ರಾಜ್ಯಾದ್ಯಂತ ಸಮೀಕ್ಷೆಕೈಗೊಂಡಾಗ ಕಂಡುಬಂದ ಅಂಕಿ ಅಂಶಗಳು ಈ ಕೆಳಗಿನಂತಿವೆ. ಗೋಸಂಗಿ ಸಮುದಾಯದಲ್ಲಿ ಶಿಕ್ಷಣಕ್ಕೆ ಅರ್ಹವಾದವರ ಸಂಖ್ಯೆಯಲ್ಲಿ ಪುರುಷರು ೮೨೯ ಹಾಗೂ ೮೩೦ ಮಹಿಳೆಯರು ಇದ್ದಾರೆ. ಆದರೆ ಒಟ್ಟು ಸಾಕ್ಷರರಲ್ಲಿ ೩೫೨ ಪುರುಷರು ಮತ್ತು ೨೮೬ ಮಹಿಳೆಯರು ಒಟ್ಟು ೬೩೮ ಜನರಿದ್ದಾರೆ. ನಿರಕ್ಷರಿಗಳು ಪುರುಷರಲ್ಲಿ ೪೭೭ ಹಾಗೂ ಮಹಿಳೆಯರು ೫೩೨ ಒಟ್ಟು ೧೦೦೯ ಜನ ಕಂಡುಬಂದಿದ್ದಾರೆ.

**ಕೋಷ್ಟಕ: ೧೦.೧ ಗೋಸಂಗಿಗಳ ಶಿಕ್ಷಣ ಪಡೆದವರ ಪ್ರಮಾಣ**

| ವಿವರ | ಗಂಡು | ಹೆಣ್ಣು | ಒಟ್ಟು |
|---|---|---|---|
| ಸಾಕ್ಷರತೆ ಹೊಂದಲು ಅರ್ಹವಾದವರು | ೮೨೯ | ೮೩೦ | ೧೬೫೯ |
| ಸಾಕ್ಷರತೆ ಹೊಂದಿದವರು | ೩೫೨ | ೨೮೬ | ೬೩೮ |
| ನಿರಕ್ಷರಿಗಳು | ೪೭೭ | ೫೩೨ | ೧೦೦೯ |

**ಶಿಕ್ಷಣದ ಸ್ಥಿತಿಗತಿ :** ಆದರೆ ಇತ್ತೀಚಿನ ದಶಕಗಳಲ್ಲಿ ಅಲೆಮಾರಿಗಳು ಒಂದು ಕಡೆ ನೆಲೆನಿಲ್ಲುತ್ತಿದ್ದಾರೆ. ಇವರಲ್ಲಿಯೂ ಶಿಕ್ಷಣದ ಕುರಿತು ಅರಿವುಂಟಾಗುತ್ತಿದೆ. ಹೀಗಾಗಿ ೨೦೦೧ರ ಈಚೆಗೆ ವಿದ್ಯಾಭ್ಯಾಸದಲ್ಲಿ ತೊಡಗಿದವರ ಸಂಖ್ಯೆ ಹೆಚ್ಚಾಗಿ ಕಂಡುಬರುತ್ತಿದೆ.

**ಕೋಷ್ಟಕ: ೧೦.೨ ಸಮೀಕ್ಷೆಗೊಳಪಟ್ಟ ಗೋಸಂಗಿಗಳ ಶೈಕ್ಷಣಿಕ ಸ್ಥಾನಮಾನ (೨೦೦೭)**

| ಸಂ. | ವಿವರ | ಗಂಡು | ಹೆಣ್ಣು | ಒಟ್ಟು |
|---|---|---|---|---|
| | ಮೆಟ್ರಿಕ್ಯೂಲೇಷನ್ ಹಾಗೂ ಪೂರ್ವಶಿಕ್ಷಣ ಪಡೆದವರು | | | |
| ೦೧ | ಪ್ರಾಥಮಿಕ | ೮೮ | ೭೧ | ೧೫೯ |
| ೦೨ | ಮಾಧ್ಯಮಿಕ | ೭೪ | ೭೧ | ೧೪೫ |
| ೦೩. | ಪ್ರೌಢಶಾಲೆ | ೧೦೨ | ೮೭ | ೧೮೯ |
| | ಒಟ್ಟು | ೨೬೪ | ೨೨೯ | ೪೯೩ |
| | ಪಿಯುಸಿ | ೪೧ | ೩೩ | ೭೪ |
| | ಪದವಿ | ೩೭ | ೧೧ | ೪೮ |
| | ಸ್ನಾತಕೋತ್ತರ | ೦೧ | ೦೨ | ೦೩ |
| | ಇತರೆ | ೦೯ | ೧೧ | ೨೦ |
| | ಒಟ್ಟು | ೮೮ | ೫೭ | ೧೪೫ |

ಪ್ರಾಥಮಿಕ ಶಿಕ್ಷಣದಿಂದ ಪ್ರೌಢಶಿಕ್ಷಣದವರೆಗೆ ಓದುತ್ತಿರುವ ಮಕ್ಕಳಲ್ಲಿ ೨೭೪ ಗಂಡು ಮತ್ತು ೨೨೯ ಹೆಣ್ಣುಮಕ್ಕಳಿದ್ದಾರೆ. ಮೆಟ್ರಿಕ್ಯೂಲೇಷನ್ ಹಾಗೂ ಅದಕ್ಕಿಂತ ಕೆಳಹಂತದ ಶಿಕ್ಷಣ ಪಡೆಯುತ್ತಿರುವ ಮಕ್ಕಳಲ್ಲಿ ಹೆಣ್ಣು ಮಕ್ಕಳಿಗಿಂತ ಗಂಡು ಮಕ್ಕಳೇ ಹೆಚ್ಚಿನ ಸಂಖ್ಯೆಯಲ್ಲಿರುವುದು ಕಂಡುಬರುತ್ತದೆ.

ಹಾಗೆಯೇ ಪ್ರೌಢಶಿಕ್ಷಣ ಪಡೆಯುತ್ತಿರುವವರಲ್ಲಿ ಪಿಯುಸಿ, ಸ್ನಾತಕೋತ್ತರ ಶಿಕ್ಷದ ವರೆಗೆ ವಿದ್ಯಾಭ್ಯಾಸ ನಡೆಸುತ್ತಿರುವ ಅಥವಾ ನಡೆಸಿದವರಲ್ಲಿ ಪುರುಷರು ೮೮ ರಷ್ಟಿದ್ದಾರೆ. ಮಹಿಳೆಯರು ೫೭ ಜನ ಇದ್ದಾರೆ. ಒಟ್ಟು ೧೪೫ ಜನ ಪ್ರೌಢಶಿಕ್ಷಣದಲ್ಲಿ ತೊಡಗಿಸಿಕೊಂಡಿರುವುದು ಕಂಡುಬರುತ್ತದೆ.

೧೯೬೧ ರಿಂದ ಇಲ್ಲಿಯವರೆಗೂ ೨೦೦೭ ಗಮನಿಸಿದರೆ ನಿಧಾನಗತಿಯಲ್ಲಿ ಗೋಸಂಗಿಗಳಲ್ಲಿ ಸಾಕ್ಷರತೆಯ ಪ್ರಮಾಣ ಅಭಿವೃದ್ಧಿಗೊಳ್ಳುತ್ತಿರುವುದು ಕಂಡುಬರುತ್ತದೆ. ಆದರೆ ಈ ಸಾಕ್ಷರತೆಯ ಅಭಿವೃದ್ಧಿಯನ್ನು ಅಂತಹ ಆಶಾದಾಯಕ ಪ್ರಗತಿ ಎಂದು ಭಾವಿಸಬೇಕಾದುದಿಲ್ಲ. ೨೦೦೧ ರಂತೆ ಕರ್ನಾಟಕದ ಸಾಕ್ಷರತೆಯ ಪ್ರಮಾಣ ಸರಾಸರಿ ಶೇ. ೬೭.೦೪ ಇದೆ. ಇದರಲ್ಲಿ ಪುರುಷರ ಸಾಕ್ಷರತೆ ಪ್ರಮಾಣ ಶೇ. ೭೬.೨೯ ರಷ್ಟಿದ್ದರೆ ಮಹಿಳೆಯರ ಸಾಕ್ಷರತೆ ಪ್ರಮಾಣ ಶೇ. ೫೭.೪೫ ರಷ್ಟಿದೆ.

ಪರಿಶಿಷ್ಟ ಜಾತಿಯ ಸಾಕ್ಷರತೆ ಪ್ರಮಾಣವು ೨೦೦೧ ಒಟ್ಟು ಸರಾಸರಿ ೫೨.೮೭ ರಷ್ಟಿದೆ. ಆದರೆ ಗೋಸಂಗಿಗಳಲ್ಲಿ ಈ ಪ್ರಮಾಣವು ಒಟ್ಟು ಸರಾಸರಿ ೩೬.೦೮ರಷ್ಟು ಮಾತ್ರ ಇದೆ. ಇದರಲ್ಲಿ ಪುರುಷರು ಶೇ. ೩೯.೫೯ ಹಾಗೂ ಮಹಿಳೆಯರು ಶೇ. ೩೬.೦೮ರಷ್ಟು ಮಾತ್ರ ಪ್ರಗತಿ ಸಾಧಿಸಲು ಸಾಧ್ಯವಾಗಿದೆ. ಇತರ ಪರಿಶಿಷ್ಟ ಜಾತಿಗೆ ಸಮಾನಕ್ಕೆ ಬರಲೂ ಈ ಸಮುದಾಯಕ್ಕೆ ಇನ್ನು ಸಾಧ್ಯವಾಗದೇ ಇರುವುದು ಅಲೆಮಾರಿ ಸಮುದಾಯಗಳ ದುಸ್ಥಿತಿಯನ್ನು ತಿಳಿಸುತ್ತದೆ.

**ರಾಜಕೀಯ ಸ್ಥಿತಿಗತಿ**

ಒಬ್ಬ ವ್ಯಕ್ತಿ, ಅಥಾವ ಒಂದು ಜಾತಿ, ಒಂದು ಸಮುದಾಯ ರಾಜಕೀಯವಾಗಿ ಬೆಳೆಯಬೇಕಾದರೆ ಅದರ ಹಿನ್ನೆಲೆಯಾಗಿ ಮೊಟ್ಟ ಮೊದಲು ವಾಸಮಾಡಲು ಅವುಗಳಿಗೆ ಮೊದಲು ನೆಲೆಯಿರಬೇಕು. ಭೂಮಿ, ಸರಿಯಾದ ದುಡುಮೆ ಇವು ಬಹಳ ಮುಖ್ಯವಾಗಿರ ಬೇಕು, ಇದರೊಂದಿಗೆ ವಿದ್ಯಾಭ್ಯಾಸವಿರಬೇಕು, ಆರ್ಥಿಕವಾಗಿ ಬೆಳೆಯಲು ಸರಿಯಾದ ದುಡಿಮೆ ಇರಬೇಕು ಇವುಗಳೊಂದಿಗೆ ಸಮಾಜದಲ್ಲಿರುವ ಸಾರ್ವಜನಿಕರು, ಅಧಿಕಾರಿ ಗಳು, ರಾಜಕೀಯ ವ್ಯಕ್ತಿಗಳ ಬೆಂಬಲವಿರಬೇಕು ಇವುಗಳ ಹಿನ್ನೆಲೆಯಲ್ಲಿ ಯಾರೇ ಆಗಲಿ ರಾಜಕೀಯವಾಗಿ ಬೆಳೆಯಲು ಸಾಧ್ಯವಾಗುತ್ತದೆ.

ಈ ಮೇಲ್ಕಂಡ ಯಾವುದೇ ಬೆಂಬಲವು ಇಲ್ಲದಿರುವ ಅತೀ ಕಡಿಮೆ ಸಂಖ್ಯೆ ಯಲ್ಲಿರುವ ಗೋಸಂಗಿ ಸಮುದಾಯವನ್ನು ರಾಜಕೀಯವಾಗಿ ಗುರುತಿಸುವುದು ಕಷ್ಟ ಸಾಧ್ಯ. ಕಾರಣ ಇವರು ಊರ ಹೊರಗೆ ವಾಸಮಾಡುವವರು. ಇವರಿಗೆ ವಿದ್ಯೆ ಇಲ್ಲ, ಆರ್ಥಿಕಸ್ಥಿತಿ ಸರಿಯಿಲ್ಲ, ಸಾಮಾಜಿಕವಾಗಿ ಯಾರೊಂದಿಗೂ ಬೆರೆಯುವ ಅವಕಾಶವಿಲ್ಲ, ಇಂಥ ಸಮುದಾಯದವರು ರಾಜಕೀಯವಾಗಿ ಬೆಳೆಯುವುದು ಕನಸಿನ ಮಾತು.

ಇತ್ತೀಚಿನ ದಿನಗಳಲ್ಲಿ ಸ್ವಲ್ಪ ಮಟ್ಟಿಗೆ ಗೋಸಂಗಿ ಸಮುದಾಯದವರು ತಾವು ಮಾಡುತ್ತಿರುವ ಕಸಬುಗಳನ್ನು ಬದಲಾಯಿಸಿಕೊಂಡಿರುತ್ತಾರೆ, ಅಲ್ಲಿ ಇಲ್ಲಿ ಸ್ವಲ್ಪ ದುಡಿಮೆಯನ್ನು ಮಾಡುತ್ತ ನಾಲ್ಕು ಕಾಸು ಸಂಪಾದನೆಯನ್ನು ಮಾಡುತ್ತಿರುವರು. ಇನ್ನು ಮುಂದಾದರು ಇಂಥಹ ಸೌಲಭ್ಯಗಳು ಇವರಿಗೂ ಸಿಗುವಂತಾಗಬೇಕಾದ ಅವಶ್ಯಕತೆ ಇದೆ.

**ಮತದಾರರ ವಿವರ**

೦-೧೭ರ ವಯೋಗುಂಪಿನ ಮಕ್ಕಳು ಮತದಾನದ ಹಕ್ಕು ಪಡೆದಿರುವುದಿಲ್ಲ. ಹೀಗಾಗಿ ಆ ಗುಂಪಿನ ಮಕ್ಕಳನ್ನು ಮತದಾರರ ಪಟ್ಟಿಯಿಂದ ಹೊರಗಿಡಲಾಗಿದೆ. ಮತದಾನ ಮಾಡಲು ಅರ್ಹವಾದವರ ಸಂಖ್ಯೆ ಒಟ್ಟು ೧೧೭೧ರಷ್ಟಿದೆ. ಇದರಲ್ಲಿ ಪುರುಷರು ೫೭೫ ಹಾಗೂ ಮಹಿಳೆಯರು ೫೯೬ ರಷ್ಟಿದ್ದಾರೆ.

**ಕೋಷ್ಟಕ: ೧೦.೩ ಗೋಸಂಗಿಗಳ ಮತದಾರರ ವಿವರ**

| ವಿವರ | ಗಂಡು | ಹೆಣ್ಣು | ಒಟ್ಟು |
|---|---|---|---|
| ೦-೧೭ವಯೋಮಾನ | ೩೧೭ | ೨೮೭ | ೬೦೪ |
| ಮತದಾನದ ಹಕ್ಕನ್ನು ಪಡೆಯಲು ಯೋಗ್ಯರಾದವರು | ೫೭೫ | ೫೯೬ | ೭೭೭೧ |
| ಮತದಾರರ ಪಟ್ಟಿಯಲ್ಲಿರುವವರು | ೪೩೪ | ೪೫೦ | ೮೮೫ |
| ಮತದಾರರ ಪಟ್ಟಿಗೆ ಸೇರದೆ ಇರುವವರು | ೧೪೧ | ೧೪೬ | ೨೮೭ |

೧೧೭೧ ಜನರಲ್ಲಿ ಕೇವಲ ೮೮೫ ಜನ ಮಾತ್ರ ಮತದಾರರ ಪಟ್ಟಿಯಲ್ಲಿದ್ದಾರೆ. ಇನ್ನೂಳಿದ ೨೮೭ ಜನ ಮತದಾರದ ಪಟ್ಟಿಯಿಂದ ಹೊರಗುಳಿದಿದ್ದಾರೆ. ಅಲೆಮಾರಿ ಬದುಕನ್ನು ಸಾಗಿಸುವಂತಹ ಗೋಸಂಗಿಗಳು ಮತದಾರರ ಪಟ್ಟಿಯಲ್ಲಿಸೇರಲು ಸಾಧ್ಯವಾಗಿಲ್ಲವೆನಿಸುತ್ತದೆ.

**ವಿಧವಾವೇತನ ಸೌಲಭ್ಯ**

ವಿಧುರರು ೩ ಮತ್ತು ವಿಧವರೆಯರು ೧೧೨ ಜನರಿದ್ದಾರೆ. ಆದರೆ ಕೇವಲ ೩೧ ಜನ ವಿಧವೆಯರು ಮಾತ್ರ ವಿಧವಾವೇತನ ಪಡೆಯಲು ಸಾಧ್ಯವಾಗಿದೆ.

**ಕೋಷ್ಟಕ: ೧೦.೪ ಗೋಸಂಗಿಗಳ ವಿಧವಾವೇತನ ಸೌಲಭ್ಯ ವಿವರ**

| ಸಂ. | ವಿವರ | ಸಂಖ್ಯೆ |
|---|---|---|
| ೦೧ | ವಿಧವೆಯರು | ೧೧೨ |
| ೦೨ | ವಿಧವಾ ವೇತನ ಪಡೆಯುವವರು | ೩೧ |

ಅನಕ್ಷರಸ್ಥ ಮಹಿಳೆಯರಿಗೆ ತಿಳುವಳಿಕೆಯ ಕೊರತೆಯಿಂದಾಗಿ ವಿಧವಾ ವೇತನ ಪಡೆಯಲು ಸೋತಿದ್ದಾರೇನೋ ಎನಿಸುತ್ತದೆ.

**ವೃದ್ಧಾಪ್ಯವೇತನ ಸೌಲಭ್ಯ**

೬೦ ಹಾಗೂ ಅದಕ್ಕಿಂತಲೂ ಮೇಲ್ಪಟ್ಟ ವಯೋಮಾನದ ಹಿರಿಯರಿಗೆ ವೃದ್ಧಾಪ್ಯವೇತನವನ್ನು ಸರ್ಕಾರ ನೀಡುತ್ತದೆ. ೬೦ ವರ್ಷಕ್ಕಿಂತ ಮೇಲ್ಪಟ್ಟು ವೃದ್ಧರಲ್ಲಿ ಪುರುಷರು ೨೬ ಹಾಗೂ ಮಹಿಳೆಯರು ೩೬ ಒಟ್ಟು ೬೨ ಜನರಿದ್ದಾರೆ. ಆದರೆ ವೃದ್ಧಾಪ್ಯ ವೇತನ ಪಡೆಯುತ್ತಿರುವವರಲ್ಲಿ ೪ ಜನ ಪುರುಷರು ೯ ಜನ ಮಹಿಳೆಯರು ಮಾತ್ರ ವೃದ್ಧಾಪ್ಯವೇತನ ಪಡೆಯುತ್ತಿದ್ದಾರೆ. ಅಜ್ಞಾನ ಹಾಗೂ ಬಡತನದಲ್ಲಿರುವ ನಿರ್ಗತಿಕ ವೃದ್ಧರಿಗೆಂದು ನಿಗದಿ ಮಾಡಿದ ಈ ಸೌಲಭ್ಯ ಪಡೆಯುವಲ್ಲಿಯೂ ಗೋಸಂಗಿಗಳು ವಂಚಿತರಾಗಿರುವುದು ಕಂಡುಬರುತ್ತದೆ.

**ಕೋಷ್ಟಕ: ೧೦.೫ ಗೋಸಂಗಿಗಳ ವೃದ್ಧಾಪ್ಯವೇತನ ಸೌಲಭ್ಯ ವಿವರ**

| ಸಂ. | ವಿವರ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೦೧ | ೬೦ಕ್ಕಿಂತ ಮೆಲ್ಪಟ್ಟ ವಯೋಮಾನದವರು | ೨೬ | ೩೬ | ೬೨ |
| ೦೨ | ವೃದ್ಧಾಪ್ಯವೇತನ ಪಡೆಯುತ್ತಿರುವವರು | ೦೪ | ೦೯ | ೧೩ |

**ವಿಕಲಾಂಗತೆ**

ಗೋಸಂಗಿಗಳಲ್ಲಿ ವಿಕಲಾಂಗತೆ ತುಂಬಾ ಕಡಿಮೆ, ನೈಸರ್ಗಿಕವಾದ ಜೀವನ ಶೈಲಿ ಇವರನ್ನು ಸದೃಢರನ್ನಾಗಿ ಮಾಡಿದೆ. ಆದರೂ ಅಲ್ಲೊಬ್ಬ ಇಲ್ಲೊಬ್ಬರಂತೆ ವಿಕಲಾಂಗರು ಕಂಡುಬರುತತಾರೆ. ಗೋಸಂಗಿಗಳಲ್ಲಿ ಮೂವರು ಕುರುಡರು, ಆರು ಜನ ಮನೋವಿಕಲತೆಗೆ ಒಳಗಾದವರು, ೨೬ ಜನ ದೈಹಿಕ ನ್ಯೂನ್ಯತೆಗಳನ್ನು ಹೊಂದಿದವರು ಕಂಡುಬರುತ್ತಾರೆ.

**ಕೋಷ್ಟಕ: ೧೦.೬ ಗೋಸಂಗಿಗಳ ವಿಕಲಾಂಗರ ವಿವರ**

| ಸಂ. | ವಿವರ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೦೧ | ಕುರುಡರು | ೦೧ | ೦೨ | ೦೩ |
| ೦೨ | ಮನೋವಿಕಲತೆ | ೦೫ | ೦೧ | ೦೬ |
| ೦೩ | ದೈಹಿಕ ನ್ಯೂನ್ಯತೆ | ೧೪ | ೧೨ | ೨೬ |
| | ಒಟ್ಟು | ೨೦ | ೧೫ | ೩೫ |
| ೦೪ | ಅಂಗವಿಕಲರ ವೇತನ ಪಡೆಯುತ್ತಿರುವವರು | ೦೯ | ೦೮ | ೧೭ |

ಒಟ್ಟು ವಿಕಲಾಂಗದಲ್ಲಿ ಕೇವಲ ೧೭ ಜನಕ್ಕೆ ಮಾತ್ರ ಅಂಗವಿಕಲರ ವೇತನ ದೊರೆಯುತ್ತಿದೆ. ಅಂದರೆ ಶೇ. ೪೮.೫೭ ರಷ್ಟು ಜನಗಳಿಗೆ ಮಾತ್ರ ಅಂಗಲಿಕಲರ ವೇತನ ಸೌಲಭ್ಯ ಪಡೆಯುತ್ತಿದ್ದಾರೆ. ಆದರೆ ಶೇ. ೫೧.೪೩ರಷ್ಟು ವಿಕಲಾಂಗರು ಅಂಗವಿಕಲ ವೆತನ ಸೌಲಭ್ಯದಿಂದ ವಂಚಿತರಾಗಿದ್ದಾರೆ.

**ಪರಿಹಾರೋಪಾಯಗಳು**

ಮೊಟ್ಟ ಮೊದಲನೆಯದಾಗಿ ಗೋಸಂಗಿ ಸಮುದಾಯವು ಸಾಮಾಜಿಕವಾಗಿ ಹಿಂದುಳಿಯದಂತೆ ಇತರೆ ಸಮಾಜಗಳು, ಸಾರ್ವಜನಿಕರು, ರಾಜಕೀಯ ವ್ಯಕ್ತಿಗಳು ಆಡಳಿತ ನಡೆಸುವ ಅಧಿಕಾರಿಗಳು ಹಾಗೂ ಸರ್ಕಾರ ಇವರನ್ನು ಬೆಂಬಲಿಸಿ ಅವರ ಜೊತೆಗೆ ಸೌಹಾರ್ಧತೆಯಿಂದ ಇವರು ನಮ್ಮವರು, ಇವರ ಬೆಳವಣಿಗಾಗಿ ಸಿಗುವಂತಹ ಸೌವಲತ್ತುಗಳುಇವರಿಗೆ ಸಿಗುವಂತೆ ಇತರರು ಇವರೊಂದಿಗೆ ಬೆರತು ಸಹಕರಿಸಬೇಕು ಮನೆ, ಜಮೀನು, ಇಲ್ಲದವರಿಗೆ ಸರ್ಕಾರವೇ ಮನೆಗಳನ್ನು ಕಟ್ಟಿಸಿ ಕೊಡಬೇಕು, ವ್ಯವಸಾಯ ಮಾಡಲು ಸಿದ್ದವಿರುವ ಗೋಸಂಗಿಗಳಿಗೆ ಜಮೀನು ಸಿಗುವಂತೆ ಮಾಡುವುದು, ತಮ್ಮದೇ ಆಗಿರುವಂಥಹ ಕಸುಬುಗಳನ್ನು ಮಾಡುವವರಿಗೆ ಸರ್ಕಾರದ ವತಿಯಿಂದ ಹಣದ ಸಹಾಯ ದೊರಕುವಂತೆ ಮಾಡುವುದು, ಕಛೇರಿಗಳಲ್ಲಿ ಸುಲಭವಾಗಿ ಜಾತಿ ಪ್ರಮಾಣ ಪತ್ರ ದೊರಕುವಂತೆ ಮಾಡುವುದು, ಮತದಾರರ ಪಟ್ಟಿಯಲ್ಲಿಲ್ಲದವರನ್ನು ಮತದಾರರ ಪಟ್ಟಿಗೆ ಸೇರಿಸುವುದು, ಪಡಿತರ ಚೀಟಿ, ಗೋಸಂಗಿಗಳ ಮಕ್ಕಳಿಗೆ ಉತ್ತಮ ಶಿಕ್ಷಣ ದೊರೆಯುವಂತೆ ವಿಶೇಷ ಸವಲತ್ತುಗಳನ್ನು ಒದಗಿಸುವುದು, ಆರ್ಥಿಕ ಅಭಿವೃದ್ಧಿ ಹೊಂದುವುದಕ್ಕೆ ಸಹಕಾರಿಯಾಗುವಂತೆ ವಿಶೇಷ ಪ್ಯಾಕೇಜ್‌ಗಳನ್ನು ರೂಪಿಸಿ ಅವುಗಳು ಸಮುದಾಯಕ್ಕೆ ದೊರಕುವಂತೆ ಮಾಡುವುದು, ಇಂಥಹ ವ್ಯವಸ್ಥೆ ನಮ್ಮ ಘನ ಸರ್ಕಾರವು ಮಾಡಿದರೆ ಇವರಿಗೂ ಸಾಮಾಜಿಕವಾಗಿ ಎಲ್ಲರೊಂದಿಗೆ ಬೆರತು ಬಾಳಲು ಅವಕಾಶವಾಗುತ್ತದೆ.

ಮುಖ್ಯವಾಗಿ ವಿದ್ಯಾವಂತ ಯುವಕರಿಗೆ ಸುಲಭವಾಗಿ ಕೆಲಸ ದೊರೆಯುವಂತಾಗ ಬೇಕು, ಇಲ್ಲವೆ ಸ್ವ ಉದ್ಯೋಗಗಳನ್ನು ನಡೆಸಲು ಸಹಾಯವಾಗುವಂತೆ ವಿವಿಧ ತರಬೇತಿಗಳನ್ನು ನೀಡಬೇಕು, ಅವರದೇ ಆಗಿರುವಂತಹ ಪ್ರಾಥಮಿಕ, ಮಾಧ್ಯಮಿಕ, ಪ್ರೌಢಶಾಲೆಗಳನ್ನು ತೆರೆಯಲು ಇವರಿಗೆ ಅವಕಾಶ ಮಾಡಬೇಕು ಹಾಗು ಆ ಶಾಲೆಗಳಿಗೆ ಆರ್ಥಿಕ ಸಹಾಯವನ್ನು ಕೊಡಬೇಕು,

ಬೇರೆ ಹೆಸರುಗಳಿಂದ ಕರೆಯಲ್ಪಡುವ ಗೋಸಂಗಿಗಳನ್ನು ಗೋಸಂಗಿ ಎಂದು ತಿದ್ದುಪಡಿ ಮಾಡಿಕೊಡಬೇಕು. ಈ ರೀತಿಯ ವ್ಯವಸ್ಥೆಯನ್ನು ಸರ್ಕಾರವು ಕರುಣೆ ತೋರಿ ಮಾಡಿಕೊಟ್ಟರೆ ಖಂಡಿತವಾಗಿಯೂ ಇವರು ಶೈಕ್ಷಣಿಕವಾಗಿ ಅಭಿವೃದ್ಧಿಯಾಗಲು ಸಾಧ್ಯತೆಯಿರುವುದು, ಅಂಗವಿಕಲ ವಿದ್ಯಾರ್ಥಿಗಳಿಗೆ ವಿಶೇಷ ಸೌವಲತ್ತನ್ನು ಒದಗಿಸಬೇಕು.

ಘನ ಸರ್ಕಾರವು ದಯಮಾಡಿ **"ಗೋಸಂಗಿ"** ಜಾತಿಯ ಬದಲಿಗೆ ತಪ್ಪಾಗಿ ದಾಖಲೆ ಆಗಿರುವ ಪರ್ಯಾಯ ಪದಗಳನ್ನು ಶಾಲಾ ದಾಖಲೆಗಳಿಂದ ರದ್ದು ಪಡಿಸಿ

ಗೋಸಂಗಿ (ಎಸ್ ಸಿ) ಎಂದು ನಮೂದಿಸಿಕೊಡುವಂತೆ ಸರ್ಕಾರವು ಸಂಬಂಧಪಟ್ಟ ಶಾಲಾ ಕಾಲೇಜು, ಅಧಿಕಾರಿಗಳಿಗೂ ಒಂದು ತಿದ್ದುಪಡಿ ಆದೇಶವನ್ನು ಹೊರಡಿಸ ಬೇಕೆಂದು ಈ ಗೋಸಂಗಿ ಸಮಾಜವತಿಯಿಂದ ಸರ್ಕಾರಕ್ಕೆ ಮನವಿ ಸಲ್ಲಿಸುತ್ತ ನಮ್ಮ ಬೇಡಿಕೆಯನ್ನು ಅತಿ ತ್ವರಿತವಾಗಿ ಈಡೇರಿಸಿ ತಿದ್ದುಪಡಿ ಆದೇಶ ಹೊರಡಿಸಲು ಕೋರಿದೆ.

ಅಲ್ಪ ಸಂಖ್ಯಾತರಾದ ಗೋಸಂಗಿಗಳು ರಾಜಕೀಯದಲ್ಲಿ ಭಾಗವಹಿಸಲು ಸಹಕಾರಿಯಾಗುವಂತೆ ವಿಶೇಷ ವ್ಯವಸ್ಥೆ ಕಲ್ಪಿಸಿಕೊಡಬೇಕು. ಗೋಸಂಗಿಗಳಿಗಿರುವ ಬೇರೆ ಬೇರೆ ಹೆಸರುಗಳು ಈ ಕೆಳಕಂಡಂತೆ ಇವೆ

೧) ಗೋಸಾಯಿ ೨) ಗೋಸಾವಿ
೩) ಸಿಂಗ್ ೪) ರಜಪೂತ್
೫) ಮಾರಾಠಿ (ಮರಾಠ) ೬) ಅತ್ತರವಾಲ
೭) ಗಂಧೆಣ್ಣೇರು ೮) ಹಿಂದೂಮರಾಠ

ಇವರನ್ನೆಲ್ಲಾ ಗೋಸಂಗಿಗಳೆಂದು ಇನ್ನು ಮುಂದೆ ಪರಿಗಣಿಸಬೇಕು.

# ಅನುಬಂಧ

## ೧. ಕಂಚಿಶಾಸನ

**ಮೂರನೆಯ ಕಥೆ** ಭೂಮಂಡಲ ಹುಟ್ಟುವುದಕ್ಕೂ ಪೂರ್ವದಲ್ಲಿ ಇದ್ದಂಥದ್ದು ಯಾವುದೆಂದರೆ ಸಮಸ್ತ ಲೋಕವು ಪ್ರಳಯಗೊಂಡು ಜಲಮಯವಾಗಿತ್ತು. ಅಂತಹ ಜಲಮಯವಾದ ಅಂಧಕಾರದಲ್ಲಿ ಬ್ರಹ್ಮನಾದ ಭಗವಂತನು ಆದಿಯುಗದಲ್ಲಿ ಹುಟ್ಟಿದನು. ನಿರಾಕಾರ, ನಿರಾಮಯ, ನಿರಕಲ್ಪಿತ, ನಿರ್ವಗ್ನತೆ, ಜ್ಯೋತಿರ್ಮಯ, ಸರೋವರವಾಗಿತ್ತು. ತನ್ನ ಆತ್ಮದಲ್ಲಿ ತಾನೇ ಜಲವನ್ನು ಹೆಪ್ಪು ಮಾಡಬೇಕೆಂದು ಯೋಚಿಸಿ ಕಾರಣ ತಿಳಿಯದೆ ಬಹು ಯೋಚನೆ ಮಾಡಿ ಭಗವಂತನು ಇಂತಹ ಜಲಮಯವಾದ ಮಹತ್ಪ್ರಳಯವನ್ನು ತಡೆಯಲು ತನ್ನ ಕರ್ಣದಲ್ಲಿ ಬೆರಳಿಟ್ಟು ಆದಿ ಜಾಂಬುಮುನಿ ಹುಟ್ಟಿಲೆಂದು ಯೋಚಿಸಿದನು. ಅಂತಹ ಯೋಚನೆಯಲ್ಲಿ ೨೫ ನಿಮಿಷದೊಳಗೆ ಅಗ್ನಿಯನ್ನು ಬೇದಿಸುವಂತಹ ಜಾಂಬುಮುನಿ ಆ ನದಿಯ ಸ್ಥಳದಲ್ಲಿ ಹುಟ್ಟಿದನು. ಅಂತಹ ಜಾಂಬುವಂತನಿಗೆ ಪರಬ್ರಹ್ಮನು, ಮಹತ್ಪ್ರಳಯವಾಗಿರುವ ಜಲವನ್ನು ಹೆಪ್ಪು ಮಾಡಿ ಭೂಮಂಡಲವನ್ನು ಮತ್ತೆ ನಿರ್ಮಿಸಿ ಜಂಬೂ ದ್ವೀಪವೆಂದು ಹೆಸರು ಪಡೆಯಬೇಕೆಂದು ಅಪ್ಪಣೆಯನ್ನು ಕೊಡಲು ಅತ್ತ ಜಾಂಬುವಂತನು ತನ್ನ ಪೂರ್ಣ ದೃಷ್ಟಿಯಿಂದ ಆದಿಶಕ್ತಿ ಹುಟ್ಟಬೇಕೆಂದು ಉಪದೇಶ ಮಾಡಿದನು. ಜಾಂಬುವಂತನ ಮಂತ್ರೋಪದೇಶದಿಂದ ಆಳಂದರ ಯುಗದಲ್ಲಿ ಆದಿಶಕ್ತಿ ಹುಟ್ಟಿದಳು ಆದಿಶಕ್ತಿಯಿಂದ ಜ್ಞಾನಶಕ್ತಿ ಉತ್ಪನ್ನವಾದಳು, ಜ್ಞಾನಶಕ್ತಿಯೊಂದಿಗೆ ಕ್ರಿಯಾಶಕ್ತಿಯನ್ನು ಮೂಡಿಸಿಕೊಂಡು ಆದಿಶಕ್ತಿಯಾದ ನಾನೆ ಒಂದು ಬೀಜರೂಪವಾಗಿರುತ್ತೇನೆ. ಜ್ಞಾನಶಕ್ತಿಯಾದ ನೀನು ಶಿವ ಸಾಮರ್ಥ್ಯದಿಂದ ವಿಷ್ಣು ರೂಪವಾದರೆ, ಆ ವಿಷ್ಣು ಶಕ್ತಿಯಿಂದ ಜಗತ್ತು ಉಂಟಾಗಬೇಕೆಂದು ನೆನಪಿಸಿದ ಮಾತ್ರಕ್ಕೆ ಆದಿಶಕ್ತಿಯು ಅಖಂಡ ಮಯವಾದ ಬ್ರಹ್ಮ ಸ್ವರೂಪ ಧರಿಸಿನಿಂತು ಜ್ಞಾನಶಕ್ತಿ ಶಿವರೂಪಧರಿಸಿ ಕ್ರಿಯಾ ಶಕ್ತಿಯು ವಿಷ್ಣು ರೂಪ ಧರಿಸಿನಿಂತು ಬಿಟ್ಟಳು.

**ಶ್ಲೋಕಂ:** "ಆದಿಶಕ್ತಿ ಮಯಂ ಬೀಜಂ ಬೀಜ ಶಕ್ತಿಮಯಂ
ಶಿವಂ. ಶಿವಶಕ್ತಿಮಯಂ ವಿಷ್ಣುಂ ಸರ್ವ ವಿಷ್ಣು
ಮಯಂ ಜಗತ್ತು"

ಎಂಬ ಸೃಷ್ಟಿಯ ಪ್ರಕಾರ ಸೃಷ್ಟಿಗೆ ಬ್ರಹ್ಮನು, ಸಂರಕ್ಷಣೆಗೆ ವಿಷ್ಣುವು, ಸಂಹಾರಕ್ಕೆ ಶಿವನು ಎಂಬುದಾಗಿ ಆದಿಶಕ್ತಿಯು ಅಭಿದಾನವಿತ್ತು ಮೂರು ಮಹಾಶಕ್ತಿಯರಿಗೆ ಅಂತಹ ಜಾಂಬುವಂತನು ತನ್ನಲ್ಲಿರುವ ಪೂರ್ಣ ಕಳಸಗಳನ್ನು ಕೊಟ್ಟು ಆದಿಶಕ್ತಿಯು ಗರ್ಭ ಪೂರ್ಣಳಾಗಿ ಪಕ್ಷಿರೂಪ ಧರಿಸಿ ಎನವಿಲುಪಿ ತಾಳಿದ ಯುಗದಲ್ಲಿ ಮೊಟ್ಟೆ

ಹುಟ್ಟಿತು. ಅದು ಒಂಭತ್ತು ದಿನಕ್ಕೆ ಭಿನ್ನವಾಯಿತು. ತಮಂಧ ಯುಗದಲ್ಲಿ ಬ್ರಹ್ಮದೇವರು ವಿಷ್ಣು, ಈಶ್ವರ ಈ ತ್ರಿಮೂರ್ತಿಗಳು ಹುಟ್ಟಿದರು. ಮುಖ್ಯ ಮೊಟ್ಟೆಯಲ್ಲಿ ಸೂರ್ಯ ದೇವರು, ತಾರಕಜಯುಗದಲ್ಲಿ ಹುಟ್ಟಿದರು. ಚಂದ್ರದೇವರು ಆಕಾಶ ನಕ್ಷತ್ರಗಳು ತಾರಕಜ ಯುಗದಲ್ಲಿ ಹುಟ್ಟಿದವು. ಬ್ರಹ್ಮನಿಗು ಶಿವನಿಗೂ ಐದೈದು ಮುಖಗಳಾಗಲಿ ಎಂದು ಆದಿಶಕ್ತಿ ನೆನಪಿಸಿದ ಮಾತ್ರಕ್ಕೆ ಸದ್ಯೋಜಾತ, ವಾಮಜಾತ, ಅಗೋಚರ, ತತ್ಪುರುಷ, ಈಶ ನಾಮದಿಂದ ಬ್ರಹ್ಮಸ್ವರೂಪನಾಗಿ ವಾರೆಗಣ್ಣಿನಿಂದ ಜಾಂಬುವಂತನು ಆ ಶಕ್ತಿಯನ್ನು ಕೇಳಲು ಓ ಶಕ್ತಿ ನೀನು ಬಂದ ಕಾಲದಲ್ಲಿ ನನ್ನ ಕಾಲು ಭದ್ರವಾಯಿತು. ಆದ ಕಾರಣ ಈ ಕಾಲಿನಲ್ಲಿ ಏನು ಇರುವುದೋ ನೋಡಿ ಹೋಗಬಹುದೆಂದು ಹೇಳಲು ಅತ್ತ ಆದಿಶಕ್ತಿಯು ಓ ಜಾಂಬುವಂತಮುನಿಗಳೆ ಅದನ್ನು ನಿಮ್ಮ ಬಲಗೈ ಕಿರುಬೆರಳಿನ ಚಿಳ್ಳುಗುರಿನಿಂದ ಗೀಚಿ ನೋಡಬಹುದು ಎಂದು ಹೇಳಲು ಆಗ ಜಾಂಬು ಮುನಿಯು ತನ್ನ ಉಗುರಿನಿಂದ ಸೀಳಲು ರಕ್ತವು ಇಲ್ಲ, ಕೀವು ಇಲ್ಲ ಅದರಲ್ಲಿ ಭಿನ್ನಜ ಯುಗದಲ್ಲಿ ಏಳುಮಂದಿ ಮಕ್ಕಳು ಹುಟ್ಟಿದರು. ಇವರಿಗೆ ಮೊದಲನೇ ಮಗನಿಗೆ ಜ್ಞಾನಮುನಿ ಎಂದು ಎರಡನೆಯ ಮಗನಿಗೆ ಯುಗಮುನಿ, ಜಗತ್ತುಮುನಿ, ಹೆಪ್ಪುಮುನಿ, ರಕ್ತಮುನಿ, ಇರುಮುನಿ ಮತ್ತು ಕೊನೆಯ ಮಗನಿಗೆ ಬಾಲಮುನಿ ಎಂದು ನಾಮಕರಣ ಮಾಡಲಾಯಿತು. ಮುಂದೆ ಇಪ್ಪತ್ತೊಂದು ಯುಗಗಳು ಹುಟ್ಟುವಂತೆ ಮಾಡಿ. ಈ ಯುಗಗಳ ಹೆಸರುಗಳು ಇತ್ತೆಂದು ಅವುಗಳು ಕ್ರಮವಾಗಿ ಆದಿ, ಅನಾದಿ, ಆಳಂದರ, ತಾಳಂದರ, ತಮಂದ, ತಾರಜ, ಬಿನ್ನಜ, ಬಿನ್ನಯುಕ್ತ, ಅಮುದಾಯುಕ್ತ, ಮಾಯಿರಣ, ಮಾನ್ಯರಣ, ಈಶ್ವರ, ಅಲಂಕೃತ, ಕೃತಯುಗ, ತ್ರೇತಾಯುಗ, ದ್ವಾಪಾರಯುಗ, ಕಲಿಯುಗ ಈ ಯುಗಗಳನ್ನು ಕಲ್ಪಿಸಿ ಆದಿಶಕ್ತಿಯು ಭೂಮಂಡಲವನ್ನು ನಿರ್ಮಿಸಲು ತ್ರಿಮೂರ್ತಿ ಗಳನ್ನು ಕೂಡಿಸಿಕೊಂಡು ಜಾಂಬುಮುನಿ ಮಕ್ಕಳನ್ನು ಛೇದಿಸಿ ಹೆಪ್ಪು ಮಾಡಬೇಕೆಂದು ಜಾಂಬುವಂತನ ನಾಲ್ಕನೇ ಮಗನಾದ ಹೆಪ್ಪು ಮುನಿಯನ್ನು ಛೇದಿಸಿ ಜಲವು ಹೆಪ್ಪು ಗಟ್ಟಲು ನಂತರ ಆರನೇ ಮಗನಾದ ಇರುಮುನಿಯನ್ನು ಛೇದಿಸಿ ಬಿಡಲು ಸಮಸ್ತ ಜಲವನ್ನು ಹೀರಿ ಭೂಮಂಡಲವೆನಿಸಿತು. ಈ ಭೂಮಂಡಲವು ಇಂದು ಜಾಂಬುವಿನ ಮಕ್ಕಳಿಂದ ನಿರ್ಮಿತವಾಯಿತು. ಆ ಭೂಮಿಯು ಜಂಬೂದ್ವೀಪವೆಂದು ಹೆಸರಾಯಿತು.

ಮುಂದೆ ಯಜ್ಞಸೂತ್ರ, ಮಂಗಳಸೂತ್ರ, ಕಾಲುಸೂತ್ರ ನಿರ್ಮಿಸುವುದಕ್ಕೆ ಇರುಮುನಿಯ ತಲೆಯನ್ನು ಅಡಿಗಲ್ಲು ಮಾಡಿ ಕಾಲುಗಳನ್ನು ಚಮಟಿಗೆ ಮಾಡಿ ಕೈಗಳನ್ನು ಇಕ್ಕಳ ಮಾಡಿ ಚರ್ಮವನ್ನು ತಿದಿಮಾಡಿ ತಲೆ ಬುರುಡೆಯ ಮೆದುಳನ್ನು ಬೇಳ್ಳಿದಾರ ಮಾಡಿ ಕಣ್ಣುಗಳನ್ನು ತ್ರಾಸು ಮಾಡಿ ಬಗ್ಗುರಿ ಎಲುಬುಗಳನ್ನು ಬಳೆ ಮಾಡಿ ಕಿವಿಗಳನ್ನು ಸುಲೋಚನ ಮಾಡಿ ಕರುಳನ್ನು ಇದ್ದಿಲು ಮಾಡಿ ರಕ್ತವನ್ನು ಬಂಗಾರಮಾಡಿ ಮೂಳೆ ಗಳನ್ನು ಬೆಳ್ಳಿ ಮಾಡಿ ಪ್ರಪಂಚಕ್ಕೆ ಆಧಾರವಾದ ಸಾಮಾಗ್ರಿಗಳನ್ನು ಮಾಡಿದನು.

ಉಳಿದ ಇನ್ನೊಂದು ಶ್ರಾವದ ದೇಹವನ್ನು ಪ್ರಾಣಪ್ರತಿಷ್ಠೆ ಮಾಡಿ ಇವನಿಗೆ ದಕ್ಕಲ ಮಹಾಮುನಿ ಎಂದು ಹೆಸರಿಡಲು ಅದನ್ನು ಅಂಗೀಕರಸಿದನು.

ಶ್ಲೋಕಂ: "ಸ್ತ್ರೀ ಹತ್ಯೆ ಬದ್ಧತೆ ಕೋಟಿ ಯುಗ ಮತ್ತರಂ
ಗೋಹತ್ಯೆ ಬಾಲಹತ್ಯೆ ಕೋಟಿಹತ್ಯೆ, ಬ್ರಹ್ಮಹತ್ಯೇ
ಬ್ರಹ್ಮಕಲ್ಪಿತಂ"

ಎಂಬ ಸೃಷ್ಟಿಯ ಪ್ರಕಾರ ಈ ಜಗತ್ತು ನಿರ್ಮಾಣ ಮಾಡಲು ಆದ್ಯ ತಂದೆಯಾದ ಜಾಂಬುಮುನಿಯ ಮಗನಾದ ದಕ್ಕಲ ಮುನಿಗೆ ಅಭಯಕೊಟ್ಟಿದ್ದು ಅದಕ್ಕೆ ಬ್ರಹ್ಮನೇ ಸಾಕ್ಷಿ. ಸೂರ್ಯ ಚಂದ್ರರೇ ಸಾಕ್ಷಿ, ಭೂಮಂಡಲೇ ಸಾಕ್ಷಿ ಚಂದ್ರಾಕಾರವಾಗಿ ನಿನಗೆ ಗ್ರಾಮ ಒಂದಕ್ಕೆ ೨೫ ರೂ. ಹಣ, ಮನೆಯೊಂದಕ್ಕೆ ೨ ಸೇರು ಧವಸದಾನ್ಯ, ಅನ್ನ, ನೀರು, ವಸ್ತ್ರ ಕೊಡಲು ಒಪ್ಪಿದನು. ಈ ದಕ್ಕದ ಮಗನನ್ನು ಜೀವಂತವಾಗಿ ಇರುವವರೆಗೂ ನೀನೆ ಸಲುಹಬೇಕು. ಮೃತ್ಯುವಾದಗ ಮಠಪತಿಗಳಾದ ಸ್ವಾಮಿಗಳು ಎಬಿನಾರುವಿ ಇವರಿಗೆ ತಿಳಿಸಬೇಕು. ನೀನು ಇವನ ಶವವನ್ನು ಸಂಸ್ಕಾರ ಮಾಡುವಂತಿಲ್ಲ. ಇವನನ್ನು ಮಠಪತಿಗಳೇ ಸಂಸ್ಕಾರ ಮಾಡಬೇಕು ಎಂದು ಆಜ್ಞೆಯನ್ನು ಮಾಡಲು ವಿಷ್ಣುವು ಜಗತ್ ಸಂರಕ್ಷಕನಾದ ನಾನು ಗಾಯತ್ರಿ ನಾಮನು ವಿಷ್ಣುವು ವೈಕುಂಠ ಪದವಿ ಕೊಟ್ಟನು. ಪರಶಿವಮೂರ್ತಿಯು ಮೃತ್ಯುವಾದ ಕಾಲಕ್ಕೆ ಸನ್ನಿದಿಯಲ್ಲಿ ಸಂಸ್ಕಾರ ಮತ್ತು ಸಮಾದಿ ಮಾಡುವುದಕ್ಕೆ ಸ್ಥಳ ಕೊಡಬೇಕು ಮತ್ತು ಅಂಗ, ರುದ್ರಾಕ್ಷಿ, ವಿಭೂತಿ ಕೊಡಲು ಬ್ರಹ್ಮ, ವಿಷ್ಣು, ಈಶ್ವರ ಈ ಮೂವರು ತ್ರಿಮೂರ್ತಿಗಳು ಒಪ್ಪಿದರು. ದಕ್ಕದ ಮುನಿಗೆ ಮದುವೆ ಕಾಲಕ್ಕೆ ೨.೪.೦ ಕೊಡಬೇಕು ದಕ್ಕದ ಮುನಿ ಮಠಪತಿಯವರಿಗೆ ಮೃತ್ಯು ಕಾಲಕ್ಕೆ ೨.೮.೦ ಕೊಡಬೇಕು. ಹುಟ್ಟಿದ ಕಾಲಕ್ಕೆ ೧.೪.೦ ಕೊಡಬೇಕು.

ದಕ್ಕದಮುನಿ ಮೃತ್ಯುವಾದ ಮಠಪತಿಯವರು ಬಾರದಿದ್ದರೆ ಊರೊಳಗೆ ಗೌಡನಿಗೆ ತಿಳಿಸಬೇಕು. ನಂತರ ಅಲ್ಲಿಂದ ಪತ್ರ ಹುಟ್ಟಿಸಿ ಕಚೇರಿಗೆ ಕಳಿಸಬಹುದು. ಮಠಪತಿ ಗುರುಗಳಿಗೆ ಉತ್ತರ ಬರೆಯಬೇಕು. ತಂದೆಯಾದ ಜಾಂಬುಮುನಿಗಳು ದಕ್ಕಲ ಮುನಿಗೆ ಕೊಡುವ ಕಾಣಿಕೆ ಕೊಡದೇ ಹೋದರೆ ನೀರು ತರುವ ಬಾವಿಗೆ ಇವರು ಆತಂಕ ಮಾಡಬಹುದು. ಇದನ್ನು ದಾಟಿ, ಬಾವಿಯ ನೀರು ಕೊಡ ತೆಗೆದುಕೊಂಡು ಹೋದರೆ, ಕಟ್ಟೆ ಕಸಬಿಯ ಯಜಮಾನರಿಗೆ ತಿಳಿಸಬೇಕು. ಆಗ ಕಟ್ಟೆ ಕಸುಬಿನ ಎಕಟ್ಟಮನೆಯವಿ ಯಜಮಾನರು ಅವರನ್ನು ಕರೆಸಿಕೊಂಡು ಹೇಳುವರು ಆಗಲು ಕೊಡದೇ ಹೋದರೆ ದಕ್ಕದ ಮುನಿಯು ಏನು ಮಾಡಬೇಕೆಂದರೆ ನಾಯಿ ಕೊರಳಿಗೆ ಏನಾದರು ಕಟ್ಟಿ ಶೃಂಗಾರ ಮಾಡಿ ಕಟ್ಟಿಮನೆಯ ಜಯಮಾನರಿಗೆ ತೋರಿಸಬೇಕು. ಆ ಯಜಮಾನರು ಅಂಥವರನ್ನು ಕುಲದಿಂದ ಬಹಿಷ್ಕಾರ ಇಡಬೇಕು. ಮಿಕ್ಕ ಮಕ್ಕಳಿಗೆ ಮಾತಂಗ ಎನ್ನುತಲು, ಬೋಗಯ್ಯ ನೆನ್ನುತಲು, ನೀಚಮಾಚಳನಂತೆ ಚೋರರೆನುತಲು ಇನ್ನು ಏನಾದರು ಕರೆದಯುವರೂ.

ಮುಂದೆ ದೇವತೆಗಳು ಹುಟ್ಟಿದರು. ಅವರ ನಾಮಗಳು ಆದಿನಾರಾಯಣ. ಇವನ ಮಗ ಬ್ರಹ್ಮ, ಬ್ರಹ್ಮನ ಮಗ ಭೃಗು, ಭೃಗುವಿನ ಮಗ ಪುಲಸ್ಯ, ಪುಲಸ್ಯನ ಮಗ ಮಂಗಳ, ಮಂಗಳನ ಮಗ ದುಂದು, ದುಂದುವಿನ ಮಗ ತ್ರಿಶಂಕು, ತ್ರಿಶಂಕುವಿನ

ಮಗ ಹರಿಶ್ಚಂದ್ರ, ಹರಿಶ್ಚಂದ್ರನ ಮಗ ಲೋಹಿತಾಶ್ವ, ಲೋಹಿತಾಶ್ವನ ಮಗ ನಳ, ನಳನ ಮಗ ಮಹದತ್ತ, ಮಹದತ್ತನ ಮಗ ನಾಗ, ನಾಗನ ಮಗ ಕಾರ್ತಿವೀರ್ಯ, ಕಾರ್ತಿವೀರ್ಯನ ಮಗ ಚತುರ್ಮುಖ ಬ್ರಹ್ಮ, ಚತುರ್ಮುಖ ಬ್ರಹ್ಮನ ಮಗ ಅರಣ್ಯ, ಅರಣ್ಯನ ಮಗ ಮೃಗರಾಜ, ಮೃಗರಾಜನ ಮಗ ದಶರಥ, ದಶರಥನ ಮಗ ಶ್ರೀರಾಮ, ಶ್ರೀರಾಮನ ಮಗ ಶ್ರೀತಗೋಪಾಲ, ಶ್ರೀತಗೋಪಾಲನ ಮಗ ವಾಸುದೇವ, ವಾಸುದೇವನ ಮಗ ಶ್ರೀಕೃಷ್ಣ, ಶ್ರೀಕೃಷ್ಣನ ಮಗ ಯತಿ ಇವರುಗಳು ಸೂರ್ಯ ವಂಶದ ರಾಜರುಗಳು.

ಆದ್ರಿನಾರಾಯಣ, ಆದ್ರಿನಾರಾಯಣನ ಮಗ ಪರಮೇಷ್ಠಿ, ಪರಮೇಷ್ಠಿಯ ಮಗ ಇಂದ್ರ, ಇಂದ್ರನ ಮಗ ನಯನೇಂದ್ರಿ, ನಯನೇಂದ್ರಿಯ ಮಗ ವಿಭು, ವಿಭುವಿನ ಮಗ ಚಂದ್ರ, ಚಂದ್ರನ ಮಗ ಶಾಂತ, ಶಾಂತನ ಮಗ ಚಕ್ರವರ್ತಿ, ಚಕ್ರವರ್ತಿಯ ಮಗ ಭೀಷ್ಮ, ಭೀಷ್ಮನ ಮಗ ಚಿತ್ರ, ಚಿತ್ರನ ಮಗ ದೃತರಾಷ್ಟ್ರ, ದೃತರಾಷ್ಟ್ರನ ಮಗ ಯುದಿಷ್ಠರ, ಯುದಿಷ್ಠರನ ಮಗ ಪವನಜ, ಪವನಜನ ಮಗ ಧನಂಜಯ, ಧನಂಜಯನ ಮಗ ನಕುಲ, ನಕುಲನ ಮಗ ಸಹದೇವ ಇವರೈವರೊಳಗಣ. ಧನಂಜಯ, ಧನಂಜಯನ ಮಗ ಅಭಿಮನ್ಯು, ಅಭಿಮನ್ಯುವಿನ ಮಗ ಪರೀಕ್ಷಿತ, ಪರೀಕ್ಷಿತನ ಮಗ ಜನಮೇಜಯ ಇವರು ಚಂದ್ರ ವಂಶದ ರಾಜರುಗಳು.

ದೃತರಾಷ್ಟ್ರ, ದೃತರಾಷ್ಟ್ರನ ಮಗ ಲಕ್ಷ್ಮಣಕುಮಾರ, ಲಕ್ಷ್ಮಣಕುಮಾರನ ಮಗ ವಿದರ್ಭರಾಯ, ವಿದರ್ಭರಾಯನ ಮಗ ತಾಮ್ರಧ್ವಜ, ತಾಮ್ರಧ್ವಜನ ಮಗ ಬೋಜಲತಿಯತಿ ಇವರು ನಾರಾಯಣನ ವಂಶದವರು. ಇನ್ನು ಆದಿನಾರಾಯಣ ಶರೀರದಲ್ಲಿ ರಘುವಂಶದಲ್ಲಿ ೧೮ ಮನುಗಳು ಹುಟ್ಟಿದರು. ಅವರ ಹೆಸರುಗಳು ಇಂತಿವೆ. ರಾಗು, ರಾಗುವಿನ ಮಗ ವನದಿ, ವನದಿಯ ಮಗ ಗುರಂಜನ, ಗುರಂಜನ ಮಗ ದಿಗುರಂಜ, ದಿಗುರಂಜನ ಮಗ ದಿಲೀಪ, ದಿಲೀಪನ ಮಗ ಕಾರ್ತಿಕ, ಕಾರ್ತಿಕನ ಮಗ ಚಿತ್ರ, ಚಿತ್ರನ ಮಗ ವಿಚಿತ್ರ, ವಿಚಿತ್ರನ ಮಗ ವೇದಮೂರ್ತಿ, ವೇದಮೂರ್ತಿಯ ಮಗ ಹಿರಣ್ಯ, ಹಿರಣ್ಯನ ಮಗ ಅರವಿಂದ, ಅರವಿಂದನ ಮಗ ಭಗೀರಥ ಇವರು ಭಗೀರಥ ವಂಶದ ರಾಜರುಗಳು.

ಕೃತಯುಗದಲ್ಲಿ ಕಾರಂಜಯುದ್ಧ, ತ್ರೇತಾಯುಗದಲ್ಲಿ ರಾಮರಾವಣರ ಯುದ್ಧ, ದ್ವಾಪಾರಾಯುಗದಲ್ಲಿ ಕೌರವ ಪಾಡಂವರ ಯುದ್ಧ, ಕಲಿಯುಗದಲ್ಲಿ ತಾರಕ ಯುದ್ಧ ಮಾಡಿ ಮುಂದೆ ಕಲಿ ನಿರ್ಮಿತವಾಗುತ್ತದೆ. ೩೬ ಮಂದಿ ದೇವತೆಗಳು ಕೂಡಿ ನರಕದಲ್ಲಿ ಹುಟ್ಟುವಂತೆ ಮಾಡಿದರು. ಮಣ್ಣಿನ ಗೊಂಬೆ ಮಾಡಿ ಸಪ್ತ ದೇವತೆಗಳು ಕೂಡಿ ಅದಕ್ಕೆ ಜೀವಾತ್ಮಾವನ್ನು ತುಂಬಿ ನರಮನುಷ್ಯರನ್ನು ಸೃಷ್ಠಿಸಿದರು. ಇವರಿಗೆ ನಾಮಕರಣ ಮಾಡಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಇವುಗಳು ಮುಂದೆ ಕಲಿಯುಗದಲ್ಲಿ ಕುಲಗಳಾಗಿ ಹುಟ್ಟಿಕೊಂಡವು. ಬ್ರಾಹ್ಮಣ ವರ್ಣಕ್ಕೆ ೨೧ ಕುಲಗಳು. ಕ್ಷತ್ರಿಯ ವರ್ಣಕ್ಕೆ ೨೭ ಕುಲಗಳು, ವೈಶ್ಯ ವರ್ಣಕ್ಕೆ ೨೩ ಕುಲಗಳು, ಶೂದ್ರವರ್ಣಕ್ಕೆ ೩೬ ಕುಲಗಳು ಹುಟ್ಟಿಕೊಂಡವು. ಈ ಮೇಲಿನ ಕುಲಗಳನ್ನು ಕಂಚಿಪುರದಲ್ಲಿ ಕಂಚಿ ಕಾಮಕ್ಷಮ್ಮನವರ

ಸನ್ನಿದಿಯಲ್ಲಿ ದೇಶಾದಿಪತಿಗಳು ಕೂಡಿ ಮಾಡಿದಂತಹ ಕಂಚಿ ಶಾಸನವನ್ನು ಮಂಗಳ ನೀ ಶುಭಂ.

ನಾರದಾದಿ ಮಹರ್ಷಿಗಳ ದ್ವಿತೀಯ ಶಾಸ್ತ್ರ ಬ್ರಹ್ಮಸ್ವರೂಪನಾದ ವಸಿಷ್ಠ ಮಹರ್ಷಿಗಳಿಗೆ ಆದಿಜಾಂಬವ ಮಹಾಮುನಿಯು ವಂಶ ಭೂತನಾದ ಗೋಸಂಗಿಯ ಪುತ್ರಿಯಾದ ಆರುಂಧತಿಯ ಮದುವೆ ಮಾಡುವ ಕಾಲದಲ್ಲಿ ತಮ್ಮ ತಮ್ಮ ಯೋಗ್ಯಾನುಸಾರವಾಗಿ ಕೊಟ್ಟಿರುವ ಬಿರುದಾವಳಿಗಳು ಸಮಸ್ತ ಋಷಿಗಳು ಆರ್ಯರು ಕೂಡಿ ವಶಿಷ್ಠರಿಗೆ ಆರಂಧುತಿಗೂ ಮಂಗಳ ಸ್ನಾನ ಮಾಡಿಸಿ ಪ್ರಥಮ ಶಾಸ್ತ್ರ ಹಾಗೂ ದ್ವಿತೀಯ ಶಾಸ್ತ್ರ ಮಾಡಿ ಪೂರೈಸಿದ ನಂತರ ೧೨ ಕಂಬ, ೧೨ ಕುಂಭ, ೧೨ ಜೋಡಿಪಂಜು, ಹಿಡಿಸಿ ನಗಾರಿ ಸೌಭತ್ತು, ತಪ್ಪಡಿ, ಸಾನಾಯಿಮೇಳ, ಬೀರಿ, ಮೃದಂಗ, ಸಮಸ್ತ ವಾದ್ಯಗಳೊಂದಿಗೆ ಕೆಂಪು ನಾಲ್ಕು ಮೂಲೆ ತಳಿ, ಬಾನತಿ ಚಪ್ಪರ, ಕರಿಕಂಬಳಿ ಗದ್ದಿಗೆ, ಜೋಡಿ ಕಳಸ ಕನ್ನಡಿಗಳಿಂದ ದೇವತಾಮುದ್ರೆ , ತಾಂಬೂಲ, ಬಾಸಿಂಗ, ಮಲ್ಲಿಗೆ ಹೂವಿನಹಾರ, ವೀರಕಂಕಣ, ಕೆಂಪು ಕುದುರೆ ವಾಹನ, ಮುತ್ತೈದೆಯರಿಂದ ಸೋಬಾನ ಪದಗಳು, ನಂತರ ಬೀಗರ ಬೋಜನ ನಾಗವಲ್ಲಿಯ ಶಾಸ್ತ್ರ ಪೂರೈಸಿದ ನಂತರ ಈ ಮದುವೆಗೆ ಕೂಡಿದ ಮಹರ್ಷಿಗಳು ೩೦ ಬಿರುದಾವಳಿಗಳು ಈ ಗೋಸಂಗಿ ಅವರಿಗೆ ಸಲ್ಲತಕ್ಕವೆಂದು ಕೊಟ್ಟ ಕಾರಣ ಇದೇ ಪ್ರಕಾರ ನಡೆಯುತ್ತಾ ಬರುವಲ್ಲಿ ಈ ಚತುರ್ಭುಜಕ್ಕೆ ಆದ ಕೃರ್ತ್ಯವಾದ ಮಹಾ ಕಂಚಿ ನಗರದೊಳಗೆ ರಾಯ ಸಿಂಹಾಸನದೀಶ್ವರ ನನ್ನು ಪ್ರಾರ್ಥಿಸಿದರು. ಈ ಗೋಸಂಗಿ ವಂಶಸಂಸ್ಥಾನದ ಆದಿಜಾಂಬುವ ಮಗನಾದ ಹುಲ್ಲಪ್ಪನ ಮಗ ಮಾರಪ್ಪನ ಮದುವೆ ಮಾಡುವ ಕಾಲದಲ್ಲಿ ಪ್ರಥಮ ಶಾಸ್ತ್ರ, ದ್ವಿತೀಯ ಶಾಸ್ತ್ರ ಪೂರೈಸಿದ ನಂತರ ಐರಾಣಿ ಚಪ್ಪರ ತರುವುದುಕ್ಕೆ ಹೋಗುವ ಕಾಲದಲ್ಲಿ ಹೊಲೆಯ ಎಚಲವಾದಏರೊಳಗೆ ವೀರಬಸಯ್ಯ ಎನ್ನುವನು. ತನ್ನ ಕುಲಸ್ಥರನ್ನು ಕೂಡಿಸಿಕೊಂಡು ಮಸಲತ್ತು ಎಜಗಳಏ ಮಾಡಿ. ಈ ಜಾಂಬುವಂತ ಮತಸ್ಥರಿಗೆ ೧೨ ಕಂಬ, ೧೨ ಕುಂಭ, ಜೋಡಿ ಪಂಜು, ಕೆಂಪು ಕುದುರೆ ವಾಹನ, ನಾಲ್ಕು ಮೂಲೆ ತಳಿ ಬಾನತಿ ಚಪ್ಪರ ಇತ್ಯಾದಿ ಸಲ್ಲಲಾರದೆಂದು ತಡೆದು ಆತಂಕ ಮಾಡಿದರು. ಅದಕ್ಕೆ ಉಭಯಸ್ಥರು ಕೂಡಿಕೊಂಡು ಕಂಚಿ ನಗರದೊಳಗೆ ಇರುವಂತಹ ಮಹಾ ರಾಜೇಂದ್ರ, ಶ್ರೀ ಜಗಪತಿ ದೊರೆಗಳು ದೇಸಾಯಿ ವೆಂಕಟರಾಯರು ಸದಾಶಿವಗೌಡರು, ಖಾಜಿಸಾಹೇಬರು, ಅನಂತ ಗೌಡರು, ಶ್ಯಾನುಭೋಗರು ಮತ್ತು ಮದನಾಡಿಗರು. ಈ ಮಹಾಜನಗಳಿರುವ ಸಭೆಗೆ ಹೋಗಿ ಉಭಯಸ್ತರ ಮುಂದೆ ಪಿರ್ಯಾದಿ ಹೇಳಿಕೊಳ್ಳಲು ಅಲ್ಲಿ ಇದ್ದಂತಹ ಮಾನ್ಯರು ಆಲೋಚನೆಯಂ ಮಾಡಿ ಭಾರತ, ರಾಮಾಯಣ, ಪಂಚವೇದವೆಂಬ, ರಾಮಾಯಣದಲ್ಲಿ ಜಾಂಬುವರು ಬ್ರಹ್ಮನಿಗಿಂತ ಆರು ತಿಂಗಳು ಮುಂಚಿನವರು. ಈ ಜಾಂಬುವಂತರಿಗಿಂತ ಯಾರು ಹಿರಿಯರಿಲ್ಲ. ಇವರ ಜಗದ ಮೇಲೆ ತ್ರಿಭುವನ ಹುಟ್ಟಿದವು ಎಂಬುದಾಗಿ ಇತಿಹಾಸದಲ್ಲಿ ಪಂಕ್ತಿ ರೂಪವಾಗಿ ಹೇಳಿದೆ ಹಾಗೂ ಉಪನಿಷತ್ತಿನಲ್ಲಿಯು ಗೋಸಂಗಿಗೆ ಆದಿದೈವ ಎಂದು

ಹೇಳಿದೆ. ಬಸವರಾಜ ಪುರಾಣದಲ್ಲಿ ಹರಳಯ್ಯನೆಂಬ ಶರಣ ಹೆಚ್ಚಿನ ಶರಣ ಎಂದು ಹೊಗಳಿದೆ. ಇಂತಹ ಭೂಮಿಗೆ ಮುಂಚೆ ಹುಟ್ಟಿದ ಆದಿಜಾಂಬುವರ ವಂಶಭೂತರಿಗೆ ಮೇಲೆ ನಮೂದಿಸಿರುವ ಹುಲಿಚರ್ಮ, ಲಿಂಗ, ಜನಿವಾರ, ಸಲ್ಲ ತಕ್ಕವಲ್ಲ ಎಂದು ಹೇಳಲು ನಮ್ಮಿಂದ ಆಗಲಾರದು. ಬ್ರಹ್ಮಾಂಡ ಪುರಾಣದಲ್ಲಿ ಸಮಸ್ತ ಮತ ಹುಟ್ಟಿದು ಇದೇ ಮಾದರು. ಮಾತಂಗರು, ಚೌಡಿಕೆಯವರುಗಳು ಉತ್ಪನ್ನ ನೋಡಿದರೆ ಈ ಮಾದಿಗರಾದ ಆದಿಜಾಂಬುವನ ಮಕ್ಕಳು ಭೂಮಿಯ ಪುತ್ರರೆಂದು, ಹಿರಿಯ ಭಕ್ತರೆಂದು ಹೇಳುತ್ತಾರೆ. ಚಲವಾದಿಯವರಾದ ನಿಮ್ಮ ಮತಕ್ಕೆ ಇಂಥ ಬಿರುದಾವಳಿಗಳು ಸಲ್ಲಲಾರವು ಎಂದು ಹೇಳುವುದಕ್ಕೆ ಆರು ಶಾಸ್ತ್ರಗಳಿವೆ. ಅವುಗಳು ಹೀಗಿವೆ. ತರ್ಕ, ವ್ಯಾಕರಣ, ಛಂದಸ್ಸು, ಅಲಂಕಾರ, ಮೀಮಾಂಸೆ, ನಿರುಕ್ತ, ಭೂಲೋಕದಲ್ಲಿಯು ಎಲ್ಲ ಮತ್ತು ೧೮ ಪುರಾಣಗಳಲ್ಲಿ ವಿಷ್ಣು ಸಂಬಂಧ ಹತ್ತು, ಬ್ರಹ್ಮ ಸಂಬಂಧ ಎರಡು, ಸೂರ್ಯ, ಚಂದ್ರ ಸಂಬಂಧಿಯಾಗಿ ಎರುಡ ಪುರಾಣಗಳಲ್ಲಿಯು ಮತ್ತು ಇತಿಹಾಸಗಳು, ಭಾರತ, ರಾಮಯಣಗಳಲ್ಲಿ ನಿಮ್ಮ ಛಲವಾದಿ ಮತ ಶ್ರೇಷ್ಠವೆಂಬ ದೃಷ್ಟಾಂತ ತಂದರೆ ನಾವು ರಾಯ ಸಿಂಹಾಸನಾಧಿಕಾರಿಗಳು, ಮಹನೀಯರು ಒಪ್ಪುತ್ತೇವೆ. ಈ ಮಾತಿಗೆ ಚಲವಾದಿ ಯವರು ಕೇಳಿಕೊಂಡು ತಾವು ಅಪ್ಪಣೆ ಕೊಟ್ಟಿದ್ದು ಒಪ್ಪಬಹುದು. ಪಂಪಾಕ್ಷೇತ್ರ ವಿಜನಗರದಲ್ಲಿ ನಯ ನ್ಯಾಯ ಪಣ ಕಟ್ಟಿಗೆ ಸೇರಿದ ಶೆಟ್ರು, ಮಠದ ಅಧಿಕಾರಿಗಳಿಗೆ ನಮ್ಮ ಮತದ ಹಿರಿಯರಲ್ಲಿ ಶಾಸ್ತ್ರ ಸಮ್ಮತವಾದ ದುಷ್ಟಾಂತಗಳಿದ್ದರೆ ತಂದೋಪ್ಪಿಸುತ್ತೇವೆ. ನಾವು ತರದಿದ್ದ ಪಕ್ಷದಲ್ಲಿ ಜಾಂಬುವರ ಮಾದಿಗರಿಗೆ ಬಿಟ್ಟು ಬಿಡುತ್ತೇವೆ ಎಂದು ಹೇಳಿದರು. ಪಂಪಾಕ್ಷೇತ್ರದ ವಿಜಯನಗರ ಶ್ರೀಶೈಲದಲ್ಲಿರುವ ಶ್ರೀ ಮಠದ ಅಧಿಕಾರಿಗಳಾದ ರಾಯಸಿಂಹಾಸನಧೀಶರು. ಶ್ರೀನಿವಾಸ ರಾಯರು, ಅಪ್ಪರಾಯರು, ಮಾದವರಾಯರು, ಪೂಸಯ್ಯನೆಂಬುವವನು ಸಾಸ್ಟಾಂಗದಂಡ ಪ್ರಣಾಮವನ್ನು ಮಾಡಿ ಮಹಾಸ್ವಾಮಿಗಳ ಮೇಲೆ ನಮೂದಿಸುರುವ ೧೨ ಕಂಭ, ೧೨ ಕುಂಭ ಇತ್ಯಾದಿ ಬಿರುದುಗಳು ನಮಗೆ ಸಲ್ಲಿವೆ. ಮಾದಿಗರಾದ ಗೋಸಂಗಿಯವರಿಗೂ ಸಲ್ಲಲ್ಲ ಎಂದು ಅಪ್ಪಣೆಯಂ ಕೊಡ ಬೇಕೆಂದು ಬೇಡಿಕೊಳ್ಳಲು. ಅಲ್ಲಿ ಇದ್ದಿಂತ ಕಂಚಿರಾಯ ಸಿಂಹಾಸನಧೀಶರು ಅಪ್ಪಣೆಯಂ ಕೊಡಲು ಮಹರ್ಷಿಗಳು ಕೊಟ್ಟ ಬಿರುದುಗಳನ್ನು ನಮ್ಮಿಂದ ತೆಗೆಯಲಾಗುವುದಿಲ್ಲ ಎಂದು ಅಪ್ಪಣೆಯಂ ಕೊಡಲು ಅಪ್ಪಣೆಯಂ ಪಡೆದು ಕೊಂಡಿದ್ದು. ಈ ಛಲವಾದಿಯವರ ಪೂಸಯ್ಯ ಎನ್ನುವನು ಹೇಳಿಕೊಂಡಿದ್ದೇನೆಂದರೆ ಈ ಬಿರುದುಗಳು ಗೋಸಂಗಿಯ ಪಣದವರಿಗೆ ಸಲ್ಲುವವು ಎಂದು ಅಪ್ಪಣೆಯ ಕೊಟ್ಟಿದ್ದೀರಿ. ನಮಗೆ ಸಲ್ಲದಕ್ಕದಾದರೆ ಒಪ್ಪು ಮಾಡಿ ಕೊಳ್ಳುತ್ತೇವೆ. ಹಾಗಿಲ್ಲದ ಪಕ್ಷದಲ್ಲಿ ಬಿಟ್ಟು ಬಿಡುತ್ತೇವೆಂದು ಅಲ್ಲಿಂದ ಕಂಚಿಗೆ ಹೋದರು. ಅಲ್ಲಿ ಇರುವಂಥ ವಜ್ರಸಿಂಹಾಸನದೀಶ್ವರಾದ ಮಹಾರಾಜ ಅಪ್ಪರಾಯರು ನರಸಿಂಹರಾಯರು, ಕಂಚಿ ವರದಪ್ಪ ಗೌಡರು. ಕರಣಿಕರು ಮಲ್ಲಯ್ಯ ನವರು. ಮಾಚೇಗೌಡರು, ತಿಮ್ಮೇಗೌಡರು, ಮಹಾಲಿಂಗಗೌಡರು, ಹನುಮ ತಿಮ್ಮೇ ಗೌಡರು, ದೇವ ತಿಮ್ಮೇಗೌಡರು, ಪಂಚಾಗದ ಬ್ರಾಹ್ಮಣರು, ಕ್ಷತ್ರಿಯರು, ದೇವಾಂಗದವರು,

ಗಾಣಿಗರು, ಇನ್ನು ಮುಂತಾದವರು ಮೂಲೆ ಪಣಕಟ್ಟಿನ ಶಿವಲಿಂಗ ಶೆಟ್ಟಿ, ನಾಗಯ್ಯ ಯಾರ್ರೆಬಲಯ್ಯ, ಮಡಿವಾಳ ಮಾಚಯ್ಯ, ಹಡಪದ ಅಪ್ಪಣ್ಣ. ಈ ಮಹಾತ್ಮರು ಕೂಡಿ ಅಪ್ಪಣೆ ಕೊಟ್ಟಿದ್ದು ಈ ಗೋಸಂಗಿಯವರು, ಮಾದಿಗರು ಇವರು ಭೂಮಿಯ ಕರ್ತರೆಂದು ಬ್ರಹ್ಮಾಂಡ ಪುರಾಣ, ವಿಷ್ಣು ಪುರಾಣ, ಶಿವಪುರಾಣಗಳಲ್ಲಿ ಮತ್ತು ಇತಿಹಾಸ ಭಾರತ, ರಾಮಾಯಣಗಳಲ್ಲಿ ಪಂಕ್ತಿ ರೂಪವಾಗಿ ಹೇಳಿರುವುದನ್ನು ನಾವು ಕಂಡಿರುವುದರಿಂದ ಈ ಮಾತಂಗಿ ಮತಸ್ಥರಿಗೆ ಮದುವೆಗಳಲ್ಲಿ ೧೨ ಕಂಬ, ೧೨ಕುಂಭ, ಜೋಡಿಪಂಜು, ಕರಿಕಂಬಳಿ ಗದ್ದಿಗೆ ನಾಲ್ಕು ಮೂಲೆ ತಳಿ, ಮೆರವಣಿಗೆ, ತಾಂಬೂಲ, ಬಾಸಿಂಗ, ಮಲ್ಲಿಗೆ ಹೂವಿನಹಾರ, ಕೆಂಪು ಕುದುರೆ ವಾಹನ, ಜೋಡು ಕಳಸ, ಕನ್ನಡಿ, ವೀರ ಕಂಕಣ, ದೇವತಾ ಮುದ್ರಿಕೆ, ಹನುಮ ಗರುಡ, ನಿಶಾನಿ ಬಟ್ಟೆ, ಪಟಾವಳಿ, ಛತ್ರಿ, ಶಾಯುದ, ವಾದ್ಯ, ನಗಾರಿನೌಬತ್ತು, ಬೇರಿ ಮೃದಂಗ, ತಮಟೆ, ಬನತನ ವಚ್ಚೆ, ಸೋನಾಯಿಮೇಳ ಅರ್ಧ ನಾರಿಜಲ್ಲಿ ಚಂದ್ರಕಾವಿ, ಮುಂಡಾಸ, ಮಲ್ಲಿಗೆ ಹೂವಿನ ತುರಾಯಿ, ಈ ಬಿರುದುಗಳಿಂದ ಗ್ರಾಮದೇವರು ಗುಡಿಯ ಬಳಿಯಿಂದ ಮೆರವಣಿಗೆ ಮಾಡಬಹುದೆಂದು ಅಪ್ಪಣೆ ಕೊಟ್ಟರು.

ಚಲುವಾದಿಯವರು ನೀವು ಹುಟ್ಟಿದ್ದು ನೋಡಿದರೆ ಪಾರ್ವತಿಯ ಸೆರಗಿನಲ್ಲಿ ಹುಟ್ಟಿದವರು. ಹುಟ್ಟಿದ ಕಾಲದಲ್ಲಿ ತೊಟ್ಟಿಲು ಅಂಕೋಲೆ ಗಿಡಕ್ಕೆ ಕಟ್ಟಿದವರು. ಚಲವಾದಿಯವರಾದ ನಿಮಗೆ ಕುಲಗುರುವು ಇಲ್ಲ. ನಿಮಗೆ ಸಲ್ಲುವ ಬಿರುದಾವಳಿಗಳಿಂದ ವಲೆರ, ಪೂರ್ಣಿಮ ಕಾಲ ಅಂದರೆ ಮಾಘಶುದ್ಧ ಪೂರ್ಣಿಮ ದಿವಸ ಮದುವೆ ಮಾಡಬಹುದು. ನಿಮಗೆ ಬಿರುದುಗಳಾದ ಒಂಭತ್ತು ಕಂಬ, ಒಂಭತ್ತು ಪಂಜು, ಮೂರು ಕಳಸ, ಎಲೆಕಳಶ, ಮೂರು ಮೂರ್ತಿ ಕಟ್ಟೆ (ವಿಭೂತಿ), ಮೂರು ಮೂಲೆ ಬಿಳಿತಾಳಿ ವಾದ್ಯಗಳಾದ ಠಕೋರಿ, ಶಂಖ, ಜಾಗಟೆ, ನಂದಣೆಯಿಂದ ಎತ್ತಿನ ಮೇಲೆ ಅವರವರ ಕೇರಿಯಲ್ಲಿ ಅಲ್ಲದೆ ಬುಡ್ಡೇ ಕಲ್ಲಿಗೆ ಹದ್ದು ಮೀರಿ ಹೋಗಬಾರದು. ಹಾಗೆ ಒಂದು ವೇಳೆ ಇದನ್ನು ದಾಟಿ ಹೋದರೆ ನಿಮ್ಮ ತಲೆ ಸಹಸ್ರ ಹೋಳಾಗುವುದು. ನೀವು ವಾದ್ಯದ ಮೇಲೆ ಬಿಳಿ ಬಟ್ಟೆ ಇಡಬೇಕು. ಕೆಂಪು ಬಟ್ಟೆ ಇಡಬಾರದು. ಇದರಂತೆ ನೀವು ನಡೆದುಕೊಳ್ಳಬೇಕು. ಇದರ ಮೇಲೆ ನಾವು ಹೇಳಲು ಯಾವ ಶಾಸ್ತ್ರದಲ್ಲೂ, ನಾಲ್ಕು ವೇದಗಳಲ್ಲೂ ಆರು ಶಾಸ್ತ್ರಗಳಲ್ಲೂ, ಹದಿನೆಂಟು ಪುರಾಣಗಳಲ್ಲಿಯೂ ಶಾಸನಗಳಲ್ಲಿಯೂ ಉಪನಿಷತ್ತಿನಲ್ಲೂ ಎರಡು ಇತಿಹಾಸಗಳಲ್ಲೂ ಛಲವಾದಿ ಜಾತಿಯವರಾದ ನೀವುಗಳು ನಿಮಗೆ ಗುರುವು ಇಲ್ಲ, ಮೇಲ್ಕಂಡ ಬಿರುದುಗಳು ಇಲ್ಲ. ನೀವುಗಳು ಮದುವೆ ಮಾಡುವ ಕಾಲದಲ್ಲಿ ನೀವು ಹದ್ದು ಮೀರಿ ನಡೆಯಬಾರದು. ನೀವುಗಳು ಅಂಥ ದುಷ್ಕಾತ ತಂದ ಕಾಲಕ್ಕೆ ನಿಮಗೆ ತಿಳಿಯ ಹೇಳುತ್ತೇವೆ. ಛಲವಾದಿ ಜಾತಿಯವರಾದ ನೀವುಗಳು ಈ ಮಾದಿಗರಾದ ಮಾದಿಗರು, ಮಾತಂಗರು, ಗೋಸಂಗಿಯವರ ಜೊತೆ ತಂಟೆತಕರಾರು ಮಾಡಬಾರದು ಎಂದು ಹೇಳಿದ್ದಕ್ಕೆ ಚಲವಾದಿ ಜಾತಿಯವರ ಯಜಮಾನನ ಮಗನು ಬುದ್ಧಿವಂತನು ಪೂಸಯ್ಯ ಎನ್ನುವನು.

ಮಹಾಸಭೆಯವರೆಗೂ ರಾಜಶ್ರೀ ನರಪತಿ ದೊರೆಗಳಿಗೂ ಸಾಸ್ಟಾಂಗವನ್ನು ಮಾಡಿ ಕೇಳಿಕೊಂಡದ್ದು ಮಹಾಸ್ವಾಮಿಗಳೇ ಈ ಮಾದಿಗರು ಗ್ರಾಮದೇವತೆ ಮುಂದೆ ಕೋಣವನ್ನು ಕಡಿದು ಬಲಭಾಗಕ್ಕೆ ಕೆಡವುತ್ತಾರೆ. ಬಲಗಾಲು ಕೊಯ್ಯುತ್ತಾರೆ. ಬಲಭಾಗ ನಮ್ಮದಾಗಿದೆ. ಆದ್ದರಿಂದ ಬಲಭಾಗಕ್ಕೆ ಕೆಡವಬಾರದು ಮತ್ತು ಬಲಗಾಲು ಕೊಯ್ಯಬಾರದು. ಆದ್ದರಿಂದ ನಮಗೆ ಅವಮಾನವಾಗಿದೆ. ಎಡಭಾಗಕ್ಕೆ ಕೆಡುವುದು, ಎಡಗಾಲು ಕೊಯ್ಯವುದು ನಮಗೆ ಕೋಣವನ್ನು ಹಿಡಿಯುವುದು ಕಂಗ, ಕುಂಭ, ಇತ್ಯಾದಿ ಕಾರ್ಯಕ್ಕೆ ಸೇರಿಸುವಂತೆ ಅಪ್ಪಣೆ ಮಾಡಬೇಕೆಂದು ಚಲವಾದಿ ಪೂಸಯ್ಯನು ಈ ಮಾದಿಗನೆಂತಲೂ ಮಾತಂಗನೆಂಬ ಶಬ್ದವು ಮಾದರಂತೆ ಮಾದಿಗರಂತೆ ಅನ್ನುತ್ತಾರೆ. ಬ್ರಹ್ಮಾಂಡದ ಪುರಾಣದಲ್ಲಿ ೧೧೨ನೇ ಗ್ರಂಥದಿಂದ ೧೧೬ನೆ ಗ್ರಂಥದವರೆಗೆ ಇದೆ.

ಶ್ಲೋಕಂ: "ರುದ್ರಸ್ಯೆ ಬದ್ರವುನಂ. ನಾಳೆಂದ್ರ ಬುವನಂ
ಹಿರಣ್ಯರೆವ ಹರಿಣಂ. ಥಿಂಚರಲಿ ಭವನ
ಚಂದ್ರ ಭಾವು ನಸ್ಯ ನಮಃ"

ಮಾದಿಗರಿಗೆ ನವಲಕ್ಷ್ಮಿಯರು, ಮೂಲದೇವತೆಗಳು ಅವರ ನಾಮಗಳು, ಆದಿನಾರಾಯಣ, ವೃಂದಾವಾಣಿ, ಲೋಕಮಹಾತಾಯಿ, ಶಶಿಸಹೋದರಿ, ಜಾನಕಿಕುಮಾರಿ ಇಂತಿ ಒಂಭತ್ತು ಮಂದಿ ಲಕ್ಷ್ಮಿಯರು, ಒಂಭತ್ತು ಮಂದಿ ಚಾರುಲಕ್ಷ್ಮಿಯರು ಹುಟ್ಟಿದರು. ಅವರ ನಾಮಗಳು ಅವರ ಮಕ್ಕಳು ಶ್ರೀ ಮಹಾಲಕ್ಷ್ಮಿ, ವಿಜಯಲಕ್ಷ್ಮಿ, ಕೀರ್ತಿಲಕ್ಷ್ಮಿ, ದಾರಿದ್ರ್ಯಲಕ್ಷ್ಮಿ, ಮಾರಿಲಕ್ಷ್ಮಿ, ಗ್ರಾಮಲಕ್ಷ್ಮಿ ಇಂತಿ ೧೮ ಮಂದಿ ಲಕ್ಷ್ಮಿಯರು ಮಾದಿಗರ ಮೂಲ ದೇವತೆಗಳು. ಇವರಿಗೆ ರಂಗ ಕುಂಭ, ಲೇ ಜಾತಿ ಭೂಮಿಯ ಮೇಲೆ ಬಿದ್ದ ಫಲಶವ ಹೊದ್ದ ವಸ್ತ್ರವು ಉಟ್ಟ ಧೋತ್ರವು ಸಹ ಮಾದಿಗರದು. ಗ್ರಾಮದೇವತೆಯ ಪೂಜಾರಿಗಳು ಮಾದಿಗರದು. ಇನ್ನು ಮುಂದೆ ನೀವು ತಂಟೆ ತಕರಾರು ಮಾಡಬಾರದು. ಕೋಣವನ್ನು ಕಡಿಯಬಾರದು, ಹಿಡಿಯಬಾರದು ಇದನ್ನು ಮೀರಿ ನಡೆಯಬಾರದೆಂಬ ತೀರ್ಪು ನೀಡಿ ಒಂದೂವರೆ ಗಜ ಪ್ರಮಾಣದ ತಾಮ್ರದ ತಗಡಿನಲ್ಲಿ ಕಂಚಿನಗರದ ರಾಯ ಸಿಂಹಾಸನಾಧೀಶರು ಶಾಸನವನ್ನ ಹುಟ್ಟಿಸಿದರು. ಈ ಶಾಸ್ತ್ರವನ್ನು ಓದಿ ತಿರಸ್ಕರಿಸಿದರೆ ಕಾಳಿಯಲ್ಲಿ ಮಹಾಬಲೇಶ್ವರ ಪೂಜೆ ಅಳಿದವ ರಾಗುವರು. ಓದದೆ ತಾತ್ಸರ ಮಾಡಿದವರು ಸ್ತ್ರೀಹತ್ಯೆ, ಶಿಶುಹತ್ಯೆ, ಗೋಹತ್ಯೆ, ಬ್ರಹ್ಮಹತ್ಯೆ ಮಾಡಿದವನ ಸ್ಥಿತಿಗೆ ಹೋಗುವರು. ಇದಕ್ಕೆ ಪಕ್ಷಿ, ಸೂರ್ಯ, ಚಂದ್ರ, ಆಕಾಶ, ತಾಮದ್ರ ತಗಡಿನ ಸಾಕ್ಷಿ ಮತ್ತು ಪುರಾಣ ಇತಿಹಾಸ ಶಾಸ್ತ್ರೋಕ್ತವೇ ಸಾಕ್ಷಿ.

ಶ್ಲೋಕಂ: "ಉಪೇಂದ್ರ ಇಂದ್ರಿವರಜಂ. ಚಂದ್ರಶೇಖರನ ಸಾಕ್ಷಿಂ"

ಕಂಚಿ ಕಾಮಾಕ್ಷಮ್ಮನವರ ಸನ್ನಿಧಿಯಲ್ಲಿ ಮಾದಿಗೆ । ಛಲವಾದಿಯವರಿಗೆ ರಾಜಿ ಮಾಡಿಸಿ ಮೊದಲು ಮಾದಿಗರಿಗೆ ಅನ್ನ ತಂಬೂಲವನ್ನಿಟ್ಟು, ಮಹಾರಾಜಾದಿರಾಜರು. ಮಹನೀಯರು ಸಂತೈಸಿದ್ದ ಕಂಚಿಯಲ್ಲಿ ನಿರ್ಣಯಿಸಿದ ಶ್ರೀ ಕಂಚಿ ಶಾಸನವನ್ನು ಸುಳ್ಳು ಅಂದವರಿಗೆ ನರಕ ಪ್ರಾಪ್ತಿ ತಪ್ಪದು. ಸಿದ್ಧಾಂತವು ತಾಮ್ರ ಶಾಸನವನ್ನು ಗಂಧಾಕ್ಷತೆ,

ಧೂಪ, ದೀಪ, ನೈವೇದ್ಯ, ದಕ್ಷಿಣೆ ತಾಂಬೂಲ ನೀರಾಂಜನದಿಂದ ಪೂಜಿಸಿ ಉಭಯ ಸ್ತರಿಗೆ ಓದಿ ಹೇಳಿದ ಕಂಚಿ ಶಾಸನಕ್ಕೆ ಮಂಗಳ ಮಸ್ತು ಮಂಗಳಾರತಿ, ಎತ್ತಿ ಮಂಗಳ ಮೊಳಹಿ ಶ್ರೀ ಗುರುವೇ ನಮಃ ಶಾಸನವು ಸಂಪೂರ್ಣಂ ಶ್ರೀ ಶ್ರೀ ಶ್ರೀ ಶ್ರೀ ಶ್ರೀ.

ನಾಲ್ಕನೆಯ ಕಥೆ: ದಕ್ಷಿಣ ಕರ್ನಾಟಕದವರು ಹೊಂದಿರುವ ಕಂಚಿ ಶಾಸನಂ ಕೈಫಿಯತ್ತು

ಶುಭ ಕಂಚಿಶಾಸನ ಲಾಭ

"ಕಂಚಿ ಶಾಸನ ಬರೆಯುವುದಕ್ಕೆ ಶುಭಮಸ್ತು ಶೋಬಾನ ಮಸ್ತು"

॥ಶ್ಲೋಕಂ॥

ನಭೋಮಿನಚ। ನಚಲಂ। ಜ್ಯೈವನಚಃ । ತೇಜೋನಚ।
ವಾಯುವು ನಮಃ। ನಕಾಶಕನಚಲ। ಚತಂ। ಚಲನಂ।
ಬುದ್ದಿಯೇ ಗೋಚರ। ನಚವಿಷ್ಣು। ನಚರುದ್ರ
ಶ್ವೇತಾರಕ । ಸರ್ವಶೂನ್ಯ।
ನೀಲಂಭ। ಬುದ್ದಿ ಶ್ರೀ ಕರ್ಣಂ।

ಭೂಮಿ ಇಲ್ಲದ ವೇಳೆಯಲ್ಲಿ, ಜಲವಿಲ್ಲದ ವೇಳೆಯಲ್ಲಿ, ವಾಯುವಿಲ್ಲದ ವೇಳೆಯಲ್ಲಿ, ಸೂರ್ಯ, ಚಂದ್ರ, ಅಂಗಾರಕ, ಬುಧ, ಬೃಹಸ್ಪತಿ, ಶುಕ್ರ, ಶನಿ, ರಾಹು, ಕೇತು, ನವಗ್ರಹಗಳು ಇಲ್ಲದ ವೇಳೆಯಲ್ಲಿ. ಕಾಮ, ಕ್ರೋದ, ಲೋಭ, ಮಧ, ಮತ್ಸರ, ಅಹಂಕಾರ ಮೂಲಕೃತಿಗಳಿಲ್ಲದ ವೇಳೆಯಲ್ಲಿ ಸಾಕ್ಷತ್ ವಿಶ್ವರೂಪವಾದ ಭಗವಂತನು ವಿಶ್ವರೂಪವನ್ನು ತಾಳಿದ.

ಸಹಸ್ರ ಕಲೆಗಳಿಂದ, ಸಹಸ್ರ ಬಾಹುಗಳಿಂದ ಸಹಸ್ರ ನೇತ್ರಗಳಿಂದ, ಸಹಸ್ರ ಕರ್ಣ ಗಳಿಂದ, ಸರಸ್ರ ಶಿರಸ್ಸುಗಳಿಂದ ಸಹಾಸ್ರ ಪಾದಗಳಿಂದಲು, ವಿಶ್ರರೂಪವನ್ನು ನಿರ್ಮಿಸುವುದಕ್ಕೆ ವಿಶ್ವರೂಪವನ್ನು ಧರಿಸಿ ಭಗವಂತನ ಹೆಸರಿನಿಂದ ಇರಲು, ಆಗ ಅಂದರೆ ನನ್ನಿಂದ ಜಗತ್ತು ನಿರ್ಮಿತವಾಗಬೇಕೆಂದು ಯೋಚಿಸಿ ಆತ್ಮಯವಾದ ಜಲದಲ್ಲಿ ಒಂದು ಶಂಕುವನ್ನು ನಿರ್ಮಿಸಿ. ಆ ಶಂಕುವಿನಲ್ಲಿ ತನ್ನ ಸಹಸ್ರ ಕಲೆಗಳಂ ತುಂಬಿದನು. ಆ ಶಂಕುವಿನಲ್ಲಿ ಉತ್ಪತ್ತಿಯಾದ ಬಲ್ಲೂಕಪತಿ, ಆದಿಜಾಂಬುವಂತನು ಉದ್ಭವಿಸಿದನು. ಈ ಪ್ರಕಾರ ಹುಟ್ಟಿದಂಥ ಋಷಿಗೆ ಜಾಂಬುಮುನಿ ಹುಟ್ಟಿದರಿಂದ ಜಾಂಬುಮುನಿಯನ್ನು ಜಂಬೂ ದ್ವೀಪಾಂತರಕ್ಕೆ ತಪಸ್ಸಿಗೆ ಹೋಗು ಎಂದು ಸಾಕ್ಷತ್ ಭಗವಂತನು ಅಪ್ಪಣೆಯಂ ಕೊಡಲು. ಜಾಂಬು ಮುನಿಯು ಜಾಂಬೂ ದ್ವೀಪಾಂತರಕ್ಕೆ ಹೋಗಿ ಜಂಬೂಕ ನದಿಯ ಹತ್ತಿರ ತಾವರೆ ಕಮಲದ ಮೇಲೆ ಕುಳಿತು ತಪಸ್ಸು ಮಾಡುತ್ತಿರಲು

ಶ್ಲೋಕಂ: "ಗುರುಬ್ರಹ್ಮ ಗುರುವಿಷ್ಣು, ಗುರುದೇವೋ ಮಹೇಶ್ವರ
ಗುರು ಸಾಕ್ಷತ್ ಪರಬ್ರಹ್ಮ ತಸ್ಮಯ ಶ್ರೀ ಗುರುವೇ ನಮಃ"

ಒಂದಾನೊಂದು ಕಾಲದಲ್ಲಿ ಪಂಚವಂಶಿತ ಕೋಟಿ ಯೋಜನೆ ವಿಸ್ತೀರ್ಣ ನಿರ್ಮಾಣಕ್ಕೆ

ಶ್ಲೋಕಂ: ಆದಿಶಕ್ತಿ ಮಯಂ ॥ಬೀಜಂ॥ ಬೀಜ ಶಕ್ತಿ ಮಯಂ ॥ಶಿವಂ॥
ಶಿವಶಕ್ತಿಮಯಂ ॥ವಿಷ್ಣುಂ॥ ಸರ್ವ ವಿಷ್ಣುಮಯಂ ॥ಜಗತ್ತು॥

ಎಂಬ ಸೃಷ್ಟಿಯ ಪ್ರಕಾರ ಶ್ರುತಿ ಪ್ರಮಾಣದಂತೆ ಈ ಮೂರು ಮಂದಿ ಶಕ್ತಿಯರಿಂದ ಜಗತ್ತು ಉದ್ಭವಿಸಬೇಕೆಂದು ಸೃಷ್ಟಿಗೆ ಬ್ರಹ್ಮನೇ ಕರ್ತನೆಂದು ಅಭಿದಾನವಿತ್ತು, ಇವರುಗಳಲ್ಲಿ ಸಮಸ್ತ ಕಥೆಗಳನ್ನು ಶಿವನು ಕೊಟ್ಟ ಮಾತ್ರಕ್ಕೆ ಸಾಕ್ಷತ್ ವಿರಾಟ್ ಪುರುಷನಾದ ಕಾರಣ ಭಗವಂತನು ಸದ್ಯೋಜಾತ, ವಾಮದೇವ, ಅಗೋರ, ತತ್ಪುರುಷ, ಈಶಾನ್ಯ ಎಂಬ ಐದು ಮುಖಗಳಿಂದ ಜಲಮಯವಾದ ಮಹಾ ಪ್ರಳಯವನ್ನು ಪೂರ್ವ ದೃಷ್ಟಿಯಿಂದ ನಿರೀಕ್ಷಿಸಿ ನೋಡಲಾಗಿ ಅಂಥ ಜಲದಲ್ಲಿ ಒಂದು ಕಳೆಯೆ ಆದಿ ಜಾಂಬುವಂತನಾಗಿ ಹುಟ್ಟಿ ತಾವರೆ ಕಮಲದ ಮೇಲೆ ಕುಳಿತು ಇರುವುದನ್ನು ಕಂಡು. ವಿರಾಟ ಪುರುಷನಾದ ಭಗವಂತನು, ಸದ್ಯೋಜಾತ ಮುಖವೆಂಬ ಕಮಲದಿಂದ ವಿರಾಟ್ ಬ್ರಹ್ಮವಿಶ್ವವನ್ನು ಉತ್ಪತ್ತ ಮಾಡಬೇಕೆಂದು ಯೋಚಿಸಿ ಅಲ್ಲಿಂದ ಮುಂದೆ ದೀಪಾಂತರಗಳು, ಯುಗಾಂತರಗಳು ಉಂಟು ಮಾಡಬೇಕೆಂದು ಯೋಚಿಸಿ ತಪಸ್ಸಿಗೆ ಹೋದನು. ಆದಿ ಜಲ ಜಾಂಬುವರ ಬಳಿಗೆ ಒಬ್ಬ ಮಾಯ ಶಕ್ತಿಯನ್ನು ನಿರ್ಮಿಸಿ ಆಕೆಗೆ ಚಂದ್ರಕಾಮಧಾರೆ ಕನ್ಯೆ ಎಂದು ಹೆಸರಿಟ್ಟು, ಆಕೆಯನ್ನು ಜಾಂಬುವಂತರ ಬಳಿಗೆ ತಪೋಭಂಗಕ್ಕೆ ಕಳಿಸಲಾಗಿ ಅಂಥ ಶಕ್ತಿಯು ತಪಸ್ಸಿನ ಜ್ವಾಲೆಗೆ ನಿಲ್ಲಲಾರದೇ ಇವರ ಮೇಲೆ ಅಪೇಕ್ಷೆಯಿಂದ ಅವರ ರೂಪು, ರೈಖೆ, ಸೌಂದರ್ಯವನ್ನು ನೋಡಿ ಸಂತೋಷವಂ ಪಟ್ಟು ನಿಂದಿರಲು ಅಷ್ಟು ಮಾತ್ರಕ್ಕೆ ಇವಳಿಗೆ ಗರ್ಭ ದಾನವು ಉಂಟಾಗಿ ನವ ಮಾಸಗಳು ತುಂಬಿ ಏಳು ಮಂದಿ ಮಕ್ಕಳು ಹುಟ್ಟಿದರು. ಆದಿಶಕ್ತಿ ಗರ್ಭದಲ್ಲಿ ಅಂಡಾ, ಪಿಂಡಾ, ಬ್ರಹ್ಮಾಂಡಗಳು, ತ್ರೀಮೂರ್ತಿಗಳು ಹುಟ್ಟಿದರು. ಜಾಂಬುವರ ವಂಶಭೂತರಾಗಿ ಹುಟ್ಟಿದಂತ ಮಕ್ಕಳಿಗೆ ಜಗಮುನಿ, ಬಿಗಿಮುನಿ, ಯುಗಮುನಿ, ಜಗತ್ತುಮುನಿ, ಹೆಪ್ಪುಮುನಿ, ರಕ್ತಮುನಿ ಹಾಗೂ ಕೊನೆಯ ಮಗನಿಗೆ ಗುರುಮುನಿ ಎಂದು ಹೆಸರಗಳನ್ನಿಟ್ಟು. ಅನಂತರ ಆದಿ ವಿಷ್ಣುವಿನ ನಾಭಿ ಕಮಲದಲ್ಲಿ ಚತುರ್ ಬ್ರಹ್ಮ ಹುಟ್ಟಿದನು. ಚತುರ್ ಬ್ರಹ್ಮನಿಗೆ ದೇವ ಬ್ರಹ್ಮ ಹುಟ್ಟಿದನು. ದೇವ ಬ್ರಹ್ಮನಿಗೆ, ಆದಿ ಬ್ರಹ್ಮ ಹುಟ್ಟಿದನು. ಆದಿ ಬ್ರಹ್ಮನಿಗೆ ಶಿವಬ್ರ ಹ್ಮ ಹುಟ್ಟಿದನು. ಶಿವಬ್ರಹ್ಮನಿಗೆ ಪುಲಸ್ಯ ಬ್ರಹ್ಮ ಹುಟ್ಟಿದನು. ಪುಲಸ್ಯ ಬ್ರಹ್ಮನಿಗೆ ಪೂಜಾರಿ ಬ್ರಹ್ಮ ಹುಟ್ಟಿದನು. ಪೂಜಾರಿ ಬ್ರಹ್ಮನಿಗೆ ಸುಖ ಬ್ರಹ್ಮ ಹುಟ್ಟಿದನು. ಸುಖಬ್ರಹ್ಮನಿಗೆ ನವಬ್ರಹ್ಮ ಹುಟ್ಟಿದನು. ನವಬ್ರಹ್ಮನಿಗೆ ಕಶ್ಯಪ ಬ್ರಹ್ಮ ಹುಟ್ಟಿದನು. ಕಶ್ಯಪ ಬ್ರಹ್ಮನಿಗೆ ದೇವೇಂದ್ರನು ಹುಟ್ಟಿದನು. ದೇವೇಂದ್ರನು ಅಸ್ಥಿರ ಸಮ್ಯುಯಂಗಳಂ ಹೆಸರು ಉಂಟು ಮಾಡಿ ಯಾವುವೆಂದರೆ. ಆದಿ, ಅಳಂದರ, ಕಳಂದರ, ಅನಂತ, ಅದ್ಭುತ, ತಂಡಜ, ತಾರಜ, ಬಿನ್ನಜ, ಅಯುಕ್ತ, ಅನುದಾಯುಕ್ತ, ಮಣಿರಣ, ಮಾನ್ಯರಣ, ವಿಶ್ವರಮ, ವಿಶ್ವವಶು, ಅಲಂಕೃತೆ, ತಮಂದ, ತಾಳಂದರ, ಕೃತಯುಗ, ಶ್ವೇತಾಯುಗ, ದ್ವಾಪಾರಯುಗ, ಕಲಿಯುಗವೆಂದು ಇವುಗಳಿಗೆ ಹೆಸರುಗಳನ್ನಿಟ್ಟು ಅಲ್ಲಿಂದ ಈಚೆ, ವಿರಾಟ್ ವಿಶ್ವ ಬ್ರಹ್ಮನು ಕೂಡಿಸಿ ಈ ಜಲಮಯವಾಗಿರುವ ಜಗತ್ತನ್ನು ಆದಿ ಜಾಂಬುವರ ಒಂದನೇ

ಮಗ ಜನಗಮುನಿಯಿಂದ ಜಗತ್ತು ಎಂಬುದಾಗಿ ಕರೆದು. ಎರಡನೇ ಮಗ ಬಿಗಿಮುನಿಯಿಂದ ಜಗತ್ತಿನ ಜಲವನ್ನು ಹೀರಿಸಿ. ಮೂರನೇ ಮಗ ಯುಗಮುನಿಯಿಂದ ಜವವನ್ನು ಕೂಡಿಸಿ. ನಾಲ್ಕನೇ ಮಗ ಜಗತ್‌ಮುನಿಯಿಂದ ಜಲವನ್ನು ಹೆಪ್ಪುಮಾಡಿಸಿ, ಐದನೆ ಮಗ ಹೆಪ್ಪುಮುನಿಯಿಂದ ರಕ್ತ ಮಾಂಸಾದಿಗಳನ್ನು ಉಂಟುಮಾಡಿ, ಉಳಿದ ಎರಡು ಮಕ್ಕಳಾದ ರಕ್ತಮುನಿ ಮತ್ತು ಗುರುಮುನಿ ಇವರನ್ನು ಜಲಪ್ರಳಯಕ್ಕೆ ಛೇದಿಸಿ ಭೂಮಿಗೆ ಹೆಪ್ಪು ಕೊಟ್ಟು ಭೂಮಂಡಲವನ್ನು ಘಟ್ಟಿಯಾಗಿ ನಿಲ್ಲಿಸಿ, ನಿಂತು, ಭೂಮಂಡಲವೆನಿಸಿತು. ಈ ಭೂಮಿಯು ಜಂಬೂ ದ್ವೀಪವೆಂದು ಹೆಸರಾಯಿತು.

ಇಲ್ಲಿಂದ ತ್ರಿಮೂರ್ತಿಗಳು, ಮೂವತ್ತು ಮೂರು ಕೋಟಿ ದೇವತೆಯರಿಗೂ ಇನ್ನು ನಿರ್ಮಿತವಾಗುವಂತ ಸಮಸ್ತರಿಗೂ ಮೋಕ್ಷ ಉಂಟು ಮಾಡುವ ಸಾಮಗ್ರಿಗಳನ್ನು, ನಿರ್ಮಿಸುವುದಕ್ಕೆ ಪರಮೇಶ್ವರನು, ವಿಶ್ವಬ್ರಹ್ಮನು, ಆದಿಜಾಂಬುವರು ಸೇರಿ ಸಾಕ್ಷತ ಶಿವನ ನವಮಂತ್ರಗಳಿಂದ ಶಿವ ಚೆಲ್ಲೆ ಒದಿಸಿ, ತೀರ್ಥವನ್ನು ಹಾಕಿ ಇಬ್ಬರು ಮಕ್ಕಳನ್ನು ಎಬ್ಬಿರಿಸಿ ಅವರಲ್ಲಿಯ ಹಿರಿಯ ಮಗನ ಶರೀರವನ್ನು ಕತ್ತರಿಸಿ, ಮುಂದೆ, ಯಜ್ಞಸೂತ್ರ, ಮಂಗಳಸೂತ್ರ, ಕಾಲುಸೂತ್ರ ನಿರ್ಮಿಸುವುದಕ್ಕೆ ಈ ಮಗನ ತಲೆಬುರುಡೆಯನ್ನು, ಅಡಿಗಲ್ಲು ಮಾಡಿ ಕಣ್ಣುಗಳನ್ನು ಸುಲೋಚನ ಮಾಡಿ, ಕಿವಿಗಳನ್ನು ತ್ರಾಸು ಮಾಡಿ ಮೂಗನ್ನು ಊದು ಕೊಳವೆ ಮಾಡಿ ಗುಂಡಿಗೆಯನ್ನು ಮೂಸೆ ಮಾಡಿ ನಾಲಿಗೆಯನ್ನು ವರೆ ಹಚ್ಚುವ ಕಲ್ಲುಮಾಡಿ ತಲೆಯ ಮೆದಳನ್ನು ಬಿಳಿಗಾರ ಮಾಡಿ, ಹಲ್ಲುಗಳನ್ನು ಹಠಗಳನ್ನಾಗಿ ಮಾಡಿ ಉಗುರುಗಳನ್ನು ಸಣ್ಣ ಪಾಗರಿಗಳನ್ನು ಮಾಡಿ, ಎರಡು ಪಕ್ಕದ ಚರ್ಮವನ್ನು ಸುಲಿದು ಬೆನ್ನುರಿ ಬೀವುಗಳಿಂದ ಹೊಲಿದು ತಿದಿಗಳಂ ಮಾಡಿ ಬೆರಳುಗಳನ್ನು ಶ್ರವಣ ಮಾಡಿ, ಎದೆಯಲ್ಲಿನ ರಕ್ತ ಹೀರಿ ದೊಮ್ಮೆಯನ್ನು ಇದ್ದಿಲು ಮಾಡಿ, ಹೊಟ್ಟೆಯೊಳಗಿನ ಕಲ್ಮಸವನ್ನು ನೆಲ್ಲು ಹೊಟ್ಟು ಮಾಡಿ, ಕೈಗಳನ್ನು ಸುತ್ತಿಗೆ ಮಾಡಿ, ಕಾಲುಗಳನ್ನು ಚಮಟಿಗೆ ಮಾಡಿ, ಬಗ್ಗುರಿ ಎಲುಬುಗಳನ್ನು ಕಬ್ಬಾಣ ಹುಕ್ಕುಗಳನ್ನಾಗಿ ಮಾಡಿ, ಕಿವಿಯಲ್ಲಿರುವ ಗುಗ್ಗೆಯನ್ನು ಅರಗು ಮಾಡಿ ಮತ್ತೊಂದು ಬಗ್ಗುರಿಯನ್ನು ಕಂಡಶ ಮಾಡಿ, ಪ್ರಪಂಚಕ್ಕೆ ಆಧಾರವಾದ ಸಾಮಾಗ್ರಿಗಳನ್ನು ಮಾಡಿದರು. ಜಾಂಬುಮುನಿ ವಿಶ್ವಬ್ರ ಹ್ಮನು ಶಿವನ ಮಂತ್ರೋಪದೇಶದಿಂದ ಕಿರಿಯ ಮಗನ ದೇಹದ ದೊಕ್ಕೆಯಲ್ಲಿ ದಕ್ಕದ ಮುನಿ ಹುಟ್ಟಿದನು. ಮಾಂಸದಲ್ಲಿ ಮಾಚಳ ಹುಟ್ಟಿದನು.

ಶ್ಲೋಕಂ "ಸ್ತ್ರೀ ಹತ್ಯೆ ಬಧ್ಧತೆ, ಕೋಟಿಯುಗ ಮುಕ್ತರಂ
ಗೋಹತ್ಯೆ, ಬಾಲಹತ್ಯೆ, ಕೋಟಿ ಹತ್ಯೆ, ಬ್ರಹ್ಮಹತ್ಯೆ"

ಬ್ರಹ್ಮಕಲ್ಪಿತಂ ಎಂಬ ಸೃಷ್ಟಿಯ ಪ್ರಕಾರ ಈ ಜಗತ್ತನ್ನ ನಿರ್ಮಾಣ ಮಾಡಲು ಆದ್ಯ ತಂದೆಯಾದ ಜಾಂಬು ಮುನಿಯ ಮಗನಾದ ದಕ್ಕದ ಮುನಿಗೆ ಅಭಯ ಕೊಟ್ಟಿದ್ದು ಬ್ರಹ್ಮನೇ ಸಾಕ್ಷಿ, ಸೂರ್ಯ ಚಂದ್ರರೇ ಸಾಕ್ಷಿ, ಭೂಮಂಡಲವೇ ಸಾಕ್ಷಿ, ಆಕಾಶವೇ ಸಾಕ್ಷಿ, ತೊಂಭತ್ತಾರು ಕೋಟಿ ದೇವತೆಗಳೇ ಸಾಕ್ಷಿ, ಚಂದ್ರಾರ್ಕವಾಗಿ ನಿನಗೆ ಗ್ರಾಮ, ಗ್ರಾಮದಲ್ಲೂ ಕಮರಿ ಬೇಟೆ, ಸುರಾಪಾನ, ಅನ್ನ, ವಸ್ತ್ರ ಕೊಡಲು

ಒಪ್ಪಿದನು. ನಂತರ ಮಾಚಳನಿಗೆ ನಗಾರಿಕತ್ತಿ ಮುಂದು ಬಳಸುವ ಕಂಚುಕಾಳೆ ಈ ಬಿರುದುಗಳಿಂದ ಮಾಚಳ ನಿಂತರು. ಶಿವನು ವಿಶ್ವಬ್ರಹ್ಮನು ಆದಿಜಾಂಬುವರು ಈ ದಕ್ಕದ ಮುನಿಗೆ, ಕ್ಷೀರಗಂಧ, ಶಿವದಾರ, ರುದ್ರಾಕ್ಷಿ, ಕಾವಿ, ಕಮಂಡಲ, ವಿಭೂತಿ, ಕೆಂಪು ಛತ್ರಿ, ತುದಿಗಾಲು ಪಾಪೋಸು, ವೇದ ಪುಸ್ತಕ ಈ ಬಿರುದಗಳಿಂದ ದಕ್ಕದ ಮುನಿಯು ಬ್ರಹ್ಮನ ಜ್ಞಾನದಲ್ಲಿ ನಿಂತನು. ಅನಂತರ ಜಾಂಬುವರು ವಿಶ್ವಬ್ರಹ್ಮನು ಕಲೆತು ಉಂಟಾದ ಸಾಮಾಗ್ರಿಗಳಿಂದ ಕತ್ತಿಮನೆ, ಕದುರಿನ ಮನೆ, ತ್ರಾಸಿನ ಮನೆ, ಗಂಟದ ಮನೆ, ನೇಗಿಲತುದಿ ಈ ಮುಖ್ಯ ಸಾಮಗ್ರಿಗಳನ್ನು ಉಂಟು ಮಾಡಿ ಸೃಷ್ಟಿಸಿದರೆ ಪ್ರಪಂಚಕ್ಕೆ ಆಧಾರವಾಗುವವೆಂದು ಯೋಚಿಸಿ ಸಂತೋಷಪಟ್ಟರು. ಉಂಟಾದ ಸಾಮಾಗ್ರಿಗಳನ್ನು ಉಪಯೋಗಿಸಿಕೊಂಡು ಆಮೇಲೆ ಈ ಏಳು ಲೋಕಗಳನ್ನು ನಿರ್ಮಿಸಿ ಮನು, ಮಯ, ತ್ವಷ್ಟಿ ಶಿಲ್ಪಜ್ಞಾನೆಂಬ ಅಭಿದಾನ ಪಡೆದ ಮೇಲೆ ನಮೂದಿಸಿರುವ ಎಲ್ಲಾ ಯುಗಾಂತರಗಳನ್ನು ಕುರಿತು ಆಯಾ ಕಾಲಕ್ಕೆ ಸರಿಯಾಗಿ ಉತ್ಪತ್ತಿ ಅಂಗಗಳನ್ನು ವಿವರಿಸಿದರು. ಅದು ಹೇಗೆಂದರೆ ಅಲ್ಲಿಂದ ಆಚೆ ಪೂರ್ವಪರವನ್ನು ನೋಡಲಾಗಿ ಮಹಾಕೃತಿ ಆನಂದವು ಸಾಕ್ಷತ್ ಪಂಕಿವ್ರಹ ವಿಶ್ವಬ್ರಹ್ಮನು ಜಾಂಬುವರು ಉತ್ಪತ್ತಿಯಾದನಂತರ ನಾರಾಣನೆಂಬ ಅಭಿದಾನ ಉಂಟಾಯಿತು. ಆತ ನಾರಾಣನ ನಾಭಿ ಕಮಲದಲ್ಲಿ ಜ್ಞಾನಶಕ್ತಿ, ತದ್ರೂಪನಾದ ಬ್ರಹ್ಮನು ಬಲಿಷ್ಠನಾಗಿ ಹುಟ್ಟಿದನು. ತಾರಜ ಎಂಬ ಯುಗದಲ್ಲಿ ಅಂಥ ಬ್ರಹ್ಮನಿಗೆ ಅಜನೆಂಬ ಹೆಸರಾಯಿತು. ತಂಡಜ ಎಂಬ ಯುಗದಲ್ಲಿ ಅಂಥ ಬ್ರಹ್ಮನಿಗೆ ಶುದ್ಧ ರೂಪವಾಯಿತು. ಭಿನ್ನಜ ಎಂಬ ಹಂತ ಹಂತವು ಭಿನ್ನವಾಗಿ. ಭಿನ್ನಾಯುಕ್ತ ಎಂಬ ಯುಗದಲ್ಲಿ ಆಕಾಶ, ವಾಯು, ಪಾರಿಜಾತಂಗಳು ಹುಟ್ಟಿದವು. ಆಯುಕ್ತ ಎಂಬ ಯುಗದಲ್ಲಿ ಆಕಾರಗಳು ಹುಟ್ಟಿದವು. ಅಮುದಾಯುಕ್ತ ಎಂಬ ಯುಗದಲ್ಲಿ ವಾಯುದೇವರು ಹುಟ್ಟಿದರು. ಮಣಿರಣ ಎಂಬ ಯುಗದಲ್ಲಿ ವಿಘ್ನೇಶ್ವರನು ಹುಟ್ಟಿದನು. ಮಾನ್ಯರಣ ಎಂಬ ಯುಗದಲ್ಲಿ ಪೃಥ್ವಿ ಹುಟ್ಟಿತು. ವಿಶ್ವವಸು ಎಂಬ ಯುಗದಲ್ಲಿ ಕಾಮದೇನು ಕಲ್ಪವೃಕ್ಷಗಳು ಹುಟ್ಟಿದವು. ಅಲಂಕೃತ ಎಂಬ ಯುಗದಲ್ಲಿ ಸರ್ವ ಅಲಂಕಾರಗಳು ಹುಟ್ಟಿದವು. ತ್ರೇತಾಯುಗದಲ್ಲಿ ಸಪ್ತನದಿಗಳು ಹುಟ್ಟಿದವು. ದ್ವಾಪರ ಯುಗದಲ್ಲಿ ಸಪ್ತ ಋಷಿಗಳು ಹುಟ್ಟಿದರು. ಕಲಿಯುಗದಲ್ಲಿ ನಾಲ್ಕು ವೇದಗಳು ಹುಟ್ಟಿದವು. ಅವು ಯಾವುದವೆಂದರೆ ಋಗ್ವೇದ, ಯಜುರ್ ವೇದ, ಅಥರ್ವಣವೇದ, ಸಾಮವೇದ ಎಂದು ನಾಲ್ಕು ವಿಭಾಗಗಳಾದವು. ನಂತರ ಆರು ಶಾಸ್ತ್ರಗಳು, ಅಸ್ಥದನು, ಹದಿನೆಂಟು ಪುರಾಣಗಳು ಕಲ್ಪಿಸಿ ಮುಂದೆ ಶ್ರೀಮದ್ರಮಣನಾದ ಕಾರಣ ಮಹಾವಿಷ್ಣುವು ನಾನಾರೂಪತಾಳಿ ಕುಲಗೋತ್ರಗಳು ವಿಂಗಡಣೆಗಳಾದವು. ಯಾವ ಮೇರೆಗೆ ಶ್ರೀ ಮದ್ರಮಣನಾದ ಮಹಾವಿಷ್ಣುವಿನ ನಾಭಿ ಕಮಲದಲ್ಲಿ ಬ್ರಹ್ಮ ಹುಟ್ಟಿದನು. ಬ್ರಹ್ಮನಿಗೆ ಮಾರೀಚ ಹುಟ್ಟಿದನು. ಮಾರಿಚನಿಗೆ ಕಶ್ಯಪ ಹುಟ್ಟಿದನು. ಕಶ್ಯಪನಿಗೆ ಅರಗೇಂದ್ರ ಹುಟ್ಟಿದನು. ಅರಗೇಂದ್ರನಿಗೆ ಜಲ ಜಾಪ್ತಮನು ಹುಟ್ಟಿದನು. ಜಲಜಾಪ್ತಮನುವಿಗೆ ವೈವಶ ಹುಟ್ಟಿದನು. ವೈವಶನಿಗೆ ವಿಕುಷಿ ಹುಟ್ಟಿದನು.

ವಿಕುಷಿಗೆ ಅಂಬರೀಶ ಹುಟ್ಟಿದನು. ಅಂಬರೀಷನಿಗೆ ಅಕ್ಷತಾತ್ಮಜ ಹುಟ್ಟಿದನು. ಅಕ್ಷತಾತ್ಮಜನಿಗೆ ಬಾನು ಹುಟ್ಟಿದನು. ಬಾನುವಿಗೆ ಸರ್ವರೇಣ್ಯ ಹುಟ್ಟಿದನು. ಸರ್ವರೇಣವಿಗೆ ತ್ರಿಶಂಕು ಹುಟ್ಟಿದನು. ತ್ರಿಶಂಕುವಿಗೆ ಹರಿಶ್ಚಂದ್ರ ಹುಟ್ಟಿದನು. ಹರಿಶ್ಚಂದ್ರನಿಗೆ ಲೋಹಿತಾಶ್ವ ಹುಟ್ಟಿದನು. ಲೋಹಿತಾಶ್ವನಿಗೆ ದುಂದುಬಿ ಮಹಾರಾಜ ಹುಟ್ಟಿದನು. ದುಂದುಬಿ ಮಹಾರಾಜನಿಗೆ ಸುಮನಶ್ಯ ಹುಟ್ಟಿದನು. ಸುಮನಸ್ಯನಿಗೆ ಸುನಂತ ಹುಟ್ಟಿದನು. ಸುನಂತನಿಗೆ ಅಂಬರೀಷ ಹುಟ್ಟಿದನು. ಅಂಬರೀಷನಿಗೆ ಉದಾಂತ ಸಾಗರ ಹುಟ್ಟಿದನು. ಉದಾಂತಿ ಸಾಗರನಿಗೆ ಕಾಕುಸ್ತ ಹುಟ್ಟಿದನು. ಕಾಕುಸ್ಥನಿಗೆ ಕಲಶಾತ್ಮ ಹುಟ್ಟಿದನು. ಕಲಶಾತ್ಮನಿಗೆ ಆಮೀಷ ಹುಟ್ಟಿದನು. ಆಮೀಷನಿಗೆ ಸಾಗರ ಹುಟ್ಟಿದನು ಸಾಗರನಿಗೆ ಸಮಂಜಯ ಹುಟ್ಟಿದನು. ಸಮಂಜಯನಿಗೆ ಡಿಂಬು ಹುಟ್ಟಿದನು. ಡಿಂಬುವಿಗೆ ರಘು ಹುಟ್ಟಿದನು. ರಘುವಿಗೆ ಅಜನು ಹುಟ್ಟಿದನು. ಅಜನಿಗೆ ಧಶರಥ, ಧಶರಥನಿಗೆ ಶ್ರೀರಾಮ, ಶ್ರೀರಾಮನಿಗೆ ಲವಕುಶ, ಲವಕುಶರಿಗೆ ಬಿಂದು, ಬಿಂದುವಿಗೆ ಪ್ರತಾಪರುದ್ರ, ಪ್ರತಾಪರುದ್ರನಿಗೆ ಅಕ್ರೂರನು, ಅಕ್ರೂರನಿಗೆ ವೇಣುಗೋಪಾಲ, ವೇಣುಗೋಪಾಲನಿಗೆ ನಂದಗೋಪಾಲ, ನಂದಗೋಪಾಲನಿಗೆ ವಾಸುದೇವ, ವಾಸುದೇವನಿಗೆ ಕುಮಾರನು ಶ್ರೀಕೃಷ್ಣನು ಹುಟ್ಟಿದರು. ಅನಿರುದ್ರ ಕುಮಾರ ಇಂದ್ರವಾಸು ಇವರುಗಳು ಸೂರ್ಯ ವಂಶದ ರಾಜರುಗಳು ಮುಂದೆ ಅತ್ರಿ, ಅತ್ರಿಗೆ ಚಂದ್ರನು ಹುಟ್ಟಿದನು. ಚಂದ್ರನಿಗೆ ಸಂತ ಗುಪ್ತನು ಹುಟ್ಟಿದನು. ಸಂತ ಗುಪ್ತನಿಗೆ ಪುರೋಹರನು ಹುಟ್ಟಿದನು. ಪುರೋಹರನಿಗೆ ದೇವದತ್ತು ಹುಟ್ಟಿದನು. ದೇವದತ್ತುವಿಗೆ ಅಕ್ಷೇರಾಮ, ಅಕ್ಷೇರಾಮನಿಗೆ ಸಾಂಕೃತನು, ಸಾಂಕೃತನಿಗೆ ಸಮಂಜಯ, ಸಮಂಜಯನಿಗೆ ವ್ಯಾಸನು, ವ್ಯಾಸನಿಗೆ ದೃತಪಾಂಡು ರಾಯರು, ದೃತ ಪಾಂಡುರಾಯನಿಗೆ ಅರ್ಜುನ, ಅರ್ಜುನನಿಗೆ ಅಭಿಮನ್ಯು ಹುಟ್ಟಿದನು, ಅಭಿಮನ್ಯುವಿಗೆ ಪರಿಷತ್, ಪರಿಷತ್‌ನಿಗೆ ಜನಮೇಜಯ, ಜನಮೇಜಯನಿಗೆ ರಾಜರಾಜ ನರೇಂದ್ರ, ರಾಜರಾಜ ನರೇಂದ್ರನಿಗೆ ಸಾರಗಂಧರನು ಹುಟ್ಟಿದನು ಇವರು ಚಂದ್ರವಂಶದ ರಾಜರುಗಳು

ಕೃತಾಯುಗದಲ್ಲಿ ಕೂರ್ಮಕರ್ತರೆಂಬ ಕಾರಂಬ ಯುದ್ಧವು ದ್ವಾಪಾರಯುಗದಲ್ಲಿ ಕೌರವ ಪಾಂಡವರ ಯುದ್ಧ, ತ್ರೇತಾಯುಗದಲ್ಲಿ ರಾಮರಾವಣರ ಯುದ್ಧವು, ಕಲಿಯುಗದಲ್ಲಿ ಸಮಸ್ತ ರಾಜರಾಜರುಗಳು ಯುದ್ಧಂಗಳು. ಕಂಚಿಕಾಮಕ್ಷಮ್ಮನವರ ಪಾದ ಸಾನಿಧ್ಯದಲ್ಲಿ ಮಹಾದೀಶಪರರು ಕೂಡಿ ನಿಶ್ಚಯಿಸಿ ತೀರ್ಮಾನಿಸಿದಂತ ಶಾಸನಕ್ಕೆ ಮಂಗಳ ನಿಜವೆಂದು ಶ್ರುತಿಸಿ ಒಂದಣ ಶ್ರೀ ಮದ್ವಿಜಯ, ಮಹೇಂದ್ರಿಗಿರಿ, ಬೃಂದ ಸಾಕ್ಷತ್ ಸತ್ಯ ವಿಚಾರದ ಸಭೆ ಸಂಪನ್ನರಾದಂತವರನ್ನು ಅತ್ರಿಕಾಮದೇನು. ಸರ್ವದೇವ ಧಯಪರರು ನಿತ್ಯ ಅನ್ನದಾನ ವಿನೋದಗಳು ವಿದ್ಯಾದಶದೀತ್ವರು ನವಬ್ರಹ್ಮರು, ದೃಷ್ಟಿ ನಿಗ್ರಹ ಶಿಷ್ಯ ಪರಿಪಾಲಕರು ಕಶ್ಯಪ ಪಾರದ್ವಜ, ವಿಶ್ವಮಿತ್ರ ಗೌತಮ, ಜಮದಗ್ನಿ, ವಶಿಷ್ಠ ಮಹಾಋಷಿಗಳಿಗೆ ಗೋಸಂಗಿ ವಂಶಬೂತರಾದ ಅರಳಯ್ಯನವರ ಹಿರಿಯ ಮಗಳಾದ ಅರುಂಧತಿಯನ್ನು ವಶಿಷ್ಠರಿಗೆ ಕೊಟ್ಟು ಮದುವೆ ಮಾಡುವ ಕಾಲದಲ್ಲಿ

ತಮ್ಮ ತಮ್ಮಗೆ ಮಾಡಿಕೊಟ್ಟಂತಹ ಈ ಮದುವೆಗೆ ಬಿರುದು ಬಾವಳಿಗಳು ಅಂದರೆ ೧೨ ಕಂಬ, ೧೨ ಕುಂಭ, ೧೨ ಪಂಜು, ಹನುಮ ಗರುಡ, ಭಗವನಿಶಾನಿಯಂ ಇಡಿಸಿ. ಕರಿಕಂಬಳಿ ಗದ್ದಿಗೆ, ಕೆಂಪು ನಾಲ್ಕು ಮೂಲೆಗಳ ತಾಳಿ ತೊಂಡಲ ಬಾಸಿಂಗ, ಮಲ್ಲಿಗೆ ಹೂವಿನಹಾರ, ಕೆಂಪು ಕುದುರೆ ವಾಹನ, ಜೋಡಿ ಕಳಸ, ಜೋಡಿ ಕನ್ನಡಿ, ವೀರಕಂಕಣ ದೇವತಾ ಮುದ್ರಿಕೆಗಳು, ಪಟಾವಳಿ ಛತ್ರಿ, ಶಾ ಯುದ್ಧ, ನಗಾರಿ ನೌಭತ್ತು, ಬೇರಿ, ಮೃದಂಗ, ತಪ್ಪಟೆ, ಸೂನಾಯಮೆಳ, ಸಣ್ಣ ಗೆಜ್ಜೆಗಳು, ಚಂದ್ರಕಾವಿ, ಮುಂಡಸ, ಮಲ್ಲಿಗೆ ಹೂವಿನ ತುರಾಯಿ, ಕೆಂಪುಛತ್ರಿ, ಬೆಳ್ಳಿ ಕಟ್ಟಿನ ಬೆತ್ತ, ಮುತ್ತೈದೆಯರಿಂದ ಸೋಬಾನ ಪದಗಳು ವಾದ್ಯಗಳಿಂದ ನೃತ್ಯ ಗೀತೆಗಳು ಮಾವಿನ ಎಲೆ, ಅಷ್ಟ ತೋರಣ ಗಳಿಂದಲೂ ಬೀಗರ ಬೋಜನ ಪೂರೈಸಿದ ನಂತರ ನಾಗವಿಲ್ಲಿಯ ಶಾಸ್ತ್ರ ಪೂರೈಸಿದ ನಂತರ ಈ ಮೆರವಣಿಗೆ ಆದ ನಂತರ ಈ ಮದುವೆ ಕೂಡಿದ ಮಹಾಋಷಿಗಳು. ಗೋಸಂಗಿಯವರಿಗೆ ಈ ಮೂವತ್ತೆರಡು ಬಿರುದಾವಳಿಗಳು ನಿಮಗೆ ಇರಲೆಂದು ಒಪ್ಪಿಸಿದರು.

ಈ ಬಿರುದುಗಳು ಉಪ್ಪು, ನೀರು, ಭೂಮಿ, ಸೂರ್ಯ, ಚಂದ್ರ ಇರುವ ಪರ್ಯಾಂತರ ನಿಮಗೆ ಇರಲೆಂದು ನೇಮಿಸಿದರು. ಅದಾವ ಮೇರೆಗೆ ಈ ಮೂಲವನ್ನು ಹಿಡಿದು ಕಲಿಯುಗದೊಳಗೆ ನಡೆಯುತ್ತಾ ಬರುವಲ್ಲಿ ಈ ಚತುರ್ದಶ ಭುಜನಕ್ಕೆ ಅಧಿಕೃತವಾದ ಮಹಾಕಂಚಿನಗರದೊಳಗೆ ಇರುವ ವರದರಾಜ ಸ್ವಾಮಿಯಂಗಳನ್ನು ಪ್ರಾರ್ಥಿಸಿದರು. ಈ ಗೋಸಂಗಿಯವರ ವಂಶಸ್ಥರಾದ ಆದಿ ಜಾಂಬುವನ ಮಗನಾದ ಹುಲಿಯಪ್ಪನವರು ತನ್ನ ಮಗನಾದ ಮಾರಪ್ಪನ ಲಗ್ನ ಮಾಡುವ ಕಾಲದಲ್ಲಿ ಪ್ರಥಮ ಶಾಸ್ತ್ರಂ ದ್ವಿತೀಯ ಶಾಸ್ತ್ರಂ ಮಾಡಿ ಪೂರೈಸಿದ ನಂತರ ಐರಾಣಿ ಚಪ್ಪರದ ಕೆಂಪು ಕುದುರೆಯ ಮೇಲೆ ಮೆರವಣಿಗೆ ಬರುವ ಸಮಯದಲ್ಲಿ ಛಲವಾದಿಯವರ ಪೈಕಿ ವೀರಬಸಯ್ಯ ಎಂಬುವನು ಮಸಲತ್ತು ಮಾಡಿ ತನ್ನ ಕುಲಸ್ಥರನ್ನ ಕೂಡಿಸಿಕೊಂಡು ಈ ಜಾಂಬುವಂತನ ಮತಸ್ಥರಿಗೆ ಈ ಬಿರುದಾವಳಿಗಳು ಎಷ್ಟು ಮಾತ್ರಕ್ಕೂ ಸಲ್ಲಲಾರೆಂದು ತಡೆದು ಆತಂಕ ಮಾಡಿದನು. ಆಗ ಅಲ್ಲಿ ಇರುವಂಥ ಉಭಯಸ್ಥರು ಕೂಡಿ ಅಂಥ ಕಂಚಿ ನಗರದೊಳಗೆ ಇರುವ ಸದಾಶಿವೇಗೌಡರು, ಖಾಜಿ ಸಾಹೇಬರು, ಅನಂತಗೌಡರು, ಶಾನುಭೋಗ ತಿಮ್ಮಪ್ಪನವರು, ಮದನಾಡಿಗರು ಈ ಮಹಾರಾಜರುಗಳಿವರು ಸಭೆಗೆ ಹೋಗಿ ಉಬಯಸ್ಥರ ಮುಂದೆ ಪಿರ್ಯಾದಿ ಹೇಳಿಕೊಳ್ಳಲು ಅಲ್ಲಿ ಇದ್ದಂಥ ಉತ್ತಮ ಮೇಲು ಸಭೆಯ ದೈವಸ್ಥರು, ಮಹನೀಯರು, ಆಲೋಚನೆಯಂ ಮಾಡಿ ಭಾರತ, ರಾಮಾಯಣದಲ್ಲಿ ಜಾಂಬುವರು, ಬ್ರಹ್ಮನಿಗಿಂತ ಆರು ತಿಂಗಳು ಮುಂಚಿನವರು. ಈ ಜಾಂಬುವಂತರಿಗಿಂತ ಯಾರು ಹಿರಿಯರಿಲ್ಲ. ಇವರ ಜಗದ ಮೇಲೆ ತ್ರಿಭುವನ ಹುಟ್ಟಿದವು ಎಂಬುದಾಗಿ ಇತಿಹಾಸದಲ್ಲಿ ಪಂಕ್ತಿ ರೂಪವಾಗಿ ಹೇಳಿದೆ ಉಪನಿಷತ್ತಿನಲ್ಲಿಯೂ ಗೋಸಂಗಿಯವರಿಗೆ ಅದಿದೈವ ಎಂದು ಹೇಳಲಾಗಿದೆ. ಬಸವರಾಜ ಎಂಬ ಪುರಾಣದಲ್ಲಿ ಅರಳಯ್ಯನೆಂಬ ಶರಣ ಹೆಚ್ಚಿನ ಶರಣ ಎಂದು ಹೊಗಳಿದೆ. ಇಂತಹ ಭೂಮಿಗೆ ಮುಂಚೆ ಹುಟ್ಟಿದ ಆದಿ

ಜಾಂಬುವರ ವಂಶಭೂತರಿಗೆ ಮೇಲೆ ನಮೂದಿಸಿರುವ ಬಿರುದಾವಳಿಗಳು, ಹುಲಿಚರ್ಮ, ಲಿಂಗ, ಜನಿವಾರ ಸಲ್ಲತಕ್ಕದ್ದಲ್ಲವೆಂದು ಹೇಳಲು ನಮ್ಮಿಂದ ಆಗಲಾರದು. ಬ್ರಹ್ಮಾಂಡ ಪುರಾಣದಲ್ಲಿ ಸಮಸ್ತ ಮತ ಹುಟ್ಟಿದುದು. ಇದೇ ಗೋಸಂಗಿಯವರು ಮಾತಂಗದವರು, ಚೌಡಿಕೆಯವರುಗಳ ಉತ್ಪನ್ನ ನೋಡಿದರೆ ಈ ಗೋಸಂಗಿಯಾದ ಆದಿ ಜಾಂಬುವನ ಮಕ್ಕಳು ಭೂಮಿಯ ಪುತ್ರರೆಂದು, ಹಿರಿಯ ಭಕ್ತರೆಂದು ಹೇಳುತ್ತಾರೆ. ಛಲವಾದಿಯವರಾದ ನಿಮ್ಮ ಮತಕ್ಕೆ ಇಂಥ ಬಿರುದಾವಳಿಗಳು ಸಲ್ಲಲಾರವು ಎಂದು ಹೇಳುವುದಕ್ಕೆ ಆರು ಶಾಸ್ತ್ರಗಳು ಎಂದರೆ ತರ್ಕ, ವ್ಯಾಕರಣ, ಛಂದಸ್ಸು, ಅಲಂಕಾರ, ಮೀಮಾಂಸೆ, ನಿರುಪ್ತಿ ಭೂಲೋಕದಲ್ಲಿಯೂ ಹದಿನೆಂಟು ಪುರಾಣಗಳಲ್ಲಿಯೂ ವಿಷ್ಣು ಸಂಬಂಧ. ನಾಲ್ಕು ಶಿವ ಸಂಬಂಧ, ಹತ್ತು ಬ್ರಹ್ಮ ಸಂಬಂಧ, ಎರಡು ಸೂರ್ಯ ಚಂದ್ರ ಸಂಬಂಧಿಯಾಗಿ, ಎರಡು ಪುರಾಣಗಳಲ್ಲಿಯು ಮತ್ತು ಇತಿಹಾಸದಲ್ಲಿ ಭಾರತ ರಾಮಾಯಣಗಳಲ್ಲಿ ನಿಮ್ಮ ಛಲವಾದಿ ಮತ ಶ್ರೇಷ್ಠವೆಂಬ ದುಷ್ಟಾಂತ ತಂದರೆ ನಾವು ರಾಯಸಿಂಹಾಸನ ಅಧಿಕಾರಿಗಳು ಮಹನೀಯರು ಒಪ್ಪುತ್ತೇವೆ. ಈ ಮಾತಿಗೆ ಛಲವಾದಿಯವರು ಕೇಳಿಕೊಂಡು ತಾವು ಅಪ್ಪಣೆ ಕೊಟ್ಟದ್ದು ಒಪ್ಪಬಹುದು. ಪಂಪಕ್ಷೇತ್ರ ವಿಜಯನಗರದಲ್ಲಿ ನಯ, ನ್ಯಾಯ, ಪಣಕಟ್ಟಿಗೆ ಸೇರಿದ ಶೆಟ್ರು, ಮಟದ ಅಧಿಕಾರಿಗಳಿಗೆ ನಮ್ಮ ಮತದ ಹಿರಿಯರಲ್ಲಿ ಶಾಸ್ತ್ರ ಸಮ್ಮತವಾದ ದುಷ್ಟಾಂತಗಳಿದ್ದರೆ ತಂದೊಪ್ಪಿಸುತ್ತೇವೆ. ತರದಿದ್ದ ಪಕ್ಷದಲ್ಲಿ ಜಾಂಬುವರ ಗೋಸಂಗಿಯವರಿಗೆ ಬಿಟ್ಟು ಬಿಡುತ್ತೇವೆ ಎಂದು ಹೇಳಿದರು.

ವಿಜಯನಗರದ ಪಂಪಾಕ್ಷೇತ್ರ ಶ್ರೀಶೈಲದಲ್ಲಿರುವ ಶ್ರೀ ಮಠದ ಅಧಿಕಾರಿಗಳಿಂದ ರಾಯ ಸಿಂಹಾಸನದೀಶರು. ಶ್ರೀನಿವಾಸ ರಾಯರು, ಅಪ್ಪರಾಯರು, ಮಾದವ ರಾಯರು, ತಿರುಮಲರಾಯರು, ಜಗಪತಿ ದೊರೆಗಳು, ಜಟ್ಟಿಗಳು, ವಿದ್ವಾಂಸರು, ಕಲಿತಿರುವ ಸಭೆಗೆ ಹೋಗಿ ಸಾಸ್ಟಾಂಗವಂ ಮಾಡಿ ಬಿನ್ನಹಂ ಬೇಡಿ ಕೊಂಡಿದ್ದು ಏನೆಂದರೆ ಮಹಾಸ್ವಾಮಿಯೇ ಮೇಲೆ ನಮೂದಿಸಿರುವ ಬಿರುದಾವಳಿಗಳು ನಮಗೆ ಸಲ್ಲುವವೋ ಅಥವಾ ಗೋಸಂಗಿಯವರಿಗೆ ಸಲ್ಲುವವೋ ಅಪ್ಪಣೆ ಕೊಡಿ ಮಹಾಸ್ವಾಮಿ ಎಂದು ಕೇಳಿಕೊಳ್ಳಲು ಅಲ್ಲಿ ಇದ್ದಂಥ ಮಹನೀಯರು ಆಲೋಚನೆ ಮಾಡಿ ಈ ಗೋಸಂಗಿ ಯವರಿಗೆ ಮಹಾಋಷಿಗಳು ಕೊಟ್ಟಂಥ ಬಿರುದುಗಳನ್ನು ನಮ್ಮಿಂದ ತೆಗೆಯಲಾಗುವುದಿಲ್ಲ ಎಂದು ಇವು ಅವರಿಗೆ ಸಲ್ಲತಕ್ಕವೆಂದು ನಿಮಗೆ ಎಷ್ಟು ಮಾತ್ರಕ್ಕೂ ಸಲ್ಲಲಾರವು ಎಂದು ಕಂಚಿರಾಯ ಸಿಂಹಾಸನಾಧೀಶರು ಅಪ್ಪಣೆಯಂ ಕೊಡಲು ಅಪ್ಪಣೆಯಂ ಪಡೆದು ಈ ಬಲಗೈಯವರೊಳಗೆ ಒಬ್ಬ ಬುದ್ದಿವಂತನಾದ ಯಜಮಾನನ ಮಗನಾದ ಪೂಸಯ್ಯ ಎಂಬುವನು ಕೇಳಿಕೊಂಡದ್ದು ಏನೆಂದರೆ ಈ ಬಿರುದುಗಳು ಗೋಸಂಗಿ ಯವರಿಗೆ ಸಲ್ಲುವವು ಎಂದು ಅಪ್ಪಣೆಯಂ ಕೊಟ್ಟಿರುವಿರಿ. ನಮಗೆ ಸಲ್ಲತಕ್ಕದ್ದಾದರೆ ಒಪ್ಪು ಮಾಡಿಕೊಳ್ಳುತ್ತೇವೆ. ಹಾಗಿಲ್ಲದ ಪಕ್ಷದಲ್ಲಿ ಬಿಟ್ಟು ಬಿಡುತ್ತೇವೆಂದು ಹೇಳಿ ಅಲ್ಲಿಂದ ಕಂಚಿಗೆ ಹೋದರು. ಅಲ್ಲಿ ಇರುವಂಥ ಅಗಟ, ಮಗಟ, ವಜ್ರ ಸಿಂಹಾಸನದೀಶ್ವರರಂ ಪ್ರಾರ್ಥಿಸಿ ಮಹಾರಾಜಶ್ರೀ ಅಪ್ಪರಾಯರು, ನರಸಿಂಹರಾಯರು, ಕಂಚಿವರದಪ್ಪ ಗೌಡರು,

ಕರಣಿಕರು, ತಿರುಮಲ್ಲಯ್ಯ, ಧರಣಿ ಕುಮಾರ, ಕರಿಭಟನಾಯಕರು, ಉದ್ಯೋಗಸ್ಥರು, ಸೋಮನಾಯಕರು, ರಘವರದ ಕೆಂಗಲ್ ಮಾಚೆಗೌಡರು, ಹನುಮ ತಿಮ್ಮೇಗೌಡರು, ರುದ್ರೇಗೌಡರು, ಸಿದ್ದೇಗೌಡರು, ದೇವ ತಿಮ್ಮಗೌಡರು, ಪಂಚಾಂಗದ ಬ್ರಾಹ್ಮಣರು, ಕ್ಷತ್ರಿಯರು, ದೇವಾಂಗದವರು ಗಾಣಿಗರು, ಊರುಗೊಲ್ಲರು, ಬೇರಿ ಕೊಮಟಿಯವರು ನಗರ್ತರು, ವಾಲ್ಮೀಕರು, ಹಳ್ಳಿಕಾರರು, ಮಡಿವಾಳ ಮಾಚಣ್ಣ, ವಕ್ಕಲಿಗರ ಮುದ್ದಪ್ಪ, ಕುಂಬಾರ ನಿಂಗಣ್ಣ, ಮ್ಯಾದರ ಗುಂಡಪ್ಪ, ಕಮ್ಮಾರ ಗುಂಡಪ್ಪ, ಅಜಾಮರ ಅಪ್ಪಣ್ಣ, ಹಟ್ಟಿಗೊಲ್ಲಗೌಡರು ಮತ್ತು ಇನ್ನು ಅನೇಕ ಮಹನೀಯರು ಕೂಡಿರುವ ಸಭೆಗೆ ಈ ಚಲವಾದಿಯವರ ಬಲಗೈ ಪೂಸಯ್ಯ ಎನ್ನುವನು ಬಂದು ಸಾಸ್ಟಂಗ ನಮಸ್ಕರಿಸಿ, ನಮಗೆ ೧೨ ಕಂಬ, ೧೨ ಕುಂಭ, ೧೨ ಪಂಜು, ಕರಿಕಂಬಳಿ ಗದ್ದಿಗೆ, ಕೆಂಪು ನಾಲ್ಕು ಮೂಲೆಗಳ ತಾಳಿ, ತಾಂಬುಲ, ಬಾಸಿಂಗ, ಮಲ್ಲಿಗೆ ಹೂವಿನಹಾರ, ಕೆಂಪು ಕುದುರೆ ಮೇಲೆ ಮೆರವಣಿಗೆ, ಜೋಡಿ ಕಳಸ, ಜೋಡಿ ಕನ್ನಡಿ, ದೇವತಾ ಮುದ್ರಿಕೆಗಳು, ಹನುಮ ಗರುಡ, ನಿಶಾನಿಗಟ್ಟಿ, ಪಟಾವಳಿ ಬತ್ತಿ, ಶಾಯಂದ, ವಾದ್ಯ ನಗಾರಿ ನೌಭತ್ತು, ಬೇರಿ, ಮೃದಂಗ, ತಪ್ಪಟೆ, ಸೊನಾಯಿ ಮೇಳ, ಸಣ್ಣ ಗೆಜ್ಜೆ, ಚಂದ್ರಕಾವಿ, ಮುಂಡಸ, ಈ ಬೀರುದಾವಳಿಗಳು ಗೋಸಂಗಿಯವರಿಗೆ ಸಲ್ಲುವವೋ, ನಮಗೆ ಸಲ್ಲುವವೋ ಎಂದು ವಿನಯದಿಂದ ಕೇಳಿ ಕೊಳ್ಳಲು ಅಲ್ಲಿ ಇದ್ದಂಥ ಮಹಾನೀಯರು ಆಲೋಚನೆ ಮಾಡಿ ಈ ಗೋಸಂಗಿಯವರು ಭೂಮಿ ಕರ್ತರೆಂದು ಬ್ರ ಹ್ಮಂಡ ಪುರಾಣ, ವಿಷ್ಣು ಪುರಾಣ, ಶಿವಪುರಾಣಗಳಲ್ಲಿ ಮತ್ತು ಇತಿಹಾಸ, ಭಾರತ ರಾಮಯಣಗಳಲ್ಲಿ ಪಂಕ್ತಿ ರೂಪವಾಗಿ ಹೇಳಿರುವುದನ್ನು ನಾವು ಕಂಡಿರುವುದರಿಂದ ಈ ಬಿರುದಾವಳಿಗಳು ಗೋಸಂಗಿಯವರಿಗೆ ಸಲ್ಲತಕ್ಕದೆಂದು. ಇವು ನಿಮಗೆ ಎಷ್ಟು ಮಾತ್ರಕ್ಕೂ ಸಲ್ಲಲಾರದೆಂದು. ಗೋಸಂಗಿಯವರ ಮೆರವಣಿಗೆ ಗ್ರಾಮ ದೇವರು ಆಂಜನೇಯ ಸ್ವಾಮಿ ದೇವರ ಗುಡಿ ಬಳಿಯಿಂದ ಮೆರವಣಿಗೆ ಮಾಡಬಹುದೆಂದು ಅಪ್ಪಣೆ ಕೊಟ್ಟರು. ಇತೀ ಮೇರೆಗೆ ಚಲವಾದಿಯವರ ಪೂಸಯ್ಯನಿಗೆ ದೈವಸ್ಥರು ಹೇಳಿದ್ದೇನೆಂದರೆ ಚಲವಾದಿಯವರು ಹುಟ್ಟಿದ್ದು ನೋಡಿದರೆ ಪಾರ್ವತಿ ಸೆರಿಗನಲ್ಲಿ ಹುಟ್ಟಿದವರು. ಹುಟ್ಟಿದ ಕಾಲದಲ್ಲಿ ತೊಟ್ಟಿಲು ಅಂಕೋಲೆ ಗಿಡಕ್ಕೆ ಕಟ್ಟಿದವರು. ಚಲವಾದಿಯವರಾದ ನಿಮಗೆ ಗುರುವು ಇಲ್ಲ. ನಿಮಗೆ ಸಲ್ಲುವ ಬಿರುದು ಯಾವುವೆಂದರೆ ಹೋಳಿ ಹುಣ್ಣಿಮೆ ಕಾಲ ಅಂದರೆ ಮಾಘಶುದ್ಧ ಪೂರ್ಣಿಮ ದಿವಸ ಮದುವೆ ಮಾಡಬಹುದು. ನಿಮಗೆ ಅಂಕೋಲೆ ಕಂಬ ಒಂಭತ್ತು, ಕುಂಭ ಒಂಭತ್ತು, ಪಂಜು ಒಂಭತ್ತು, ಊಡುಗಿನ ನಾರು ತಂದು ಕಂಕಣ ಕಟ್ಟುವುದು, ಮೂರು ಕಳಶ, ಮೂರು ಮೂರ್ತಿ ಕಟ್ಟು, ಮೂರು ಮೂಲೆ ಬಿಳಿ ತಾಲಿ ವಾದ್ಯ ಯಾವುವೆಂದರೆ ತಕೋರಿ, ಶಂಕ, ಜಾಗಟೆ, ನಂದಣಿಯಿಂದ, ಎತ್ತಿನ ಮೇಲೆ ಅವರವರ ಕೇರಿಯಲ್ಲಿ ಅಲ್ಲದೆ ಅಥವಾ ಬುಡ್ಡೆ ಕಲ್ಲಿಗೆ ಹದ್ದು ಮೀರಬಾರದು. ಹದ್ದು ಮೀರಿ ಹೋದರೆ ನಿಮ್ಮ ತಲೆ ಸಹಸ್ರ ಹೋಳಾಗುವುದು. ನೀವು ವಾದ್ಯದ ಮೇಲೆ ಬಿಳಿ ಬಟ್ಟೆ ಇಡಬೇಕು. ಕೆಂಪು ಬಟ್ಟೆ ಇಡಬಾರದು. ಇದರಂತೆ

ನೀವು ನಡೆದುಕೊಳ್ಳಬಹುದೆಂದು ಅಪ್ಪಣೆ ಇತ್ತು ಇದರ ಮೇಲೆ ನಾವು ಹೇಳಲು ಯಾವ ಶಾಸ್ತ್ರದಲ್ಲೂ, ನಾಲ್ಕುವೇದದಲ್ಲೂ, ಹದಿನೆಂಟು ಪುರಾಣಗಳಲ್ಲೂ, ಶಾಸನಗಳಲ್ಲೂ, ಉಪನಿಷತ್ತಿನಲ್ಲೂ, ಎರಡು ಇತಿಹಾಸಗಳಲ್ಲೂ ಚಲವಾದಿ ಜಾತಿಯವರಾದ ನೀವುಗಳು ನಿಮಗೆ ಗುರುವು ಇಲ್ಲ. ಇವುಗಳನ್ನು ನೀವು ಮದುವೆ ಮಾಡುವ ಕಾಲದಲ್ಲಿ ಹದ್ದು ಮೀರಿ ನಡೆಯಬಾರದು. ಚಲವಾದಿ ಜಾತಿಯವರಾದ ನೀವುಗಳು ಗೋಸಂಗಿಯವರಾದ ಮಣೆಗಾರರು, ಮಾತಂಗರ ಜೊತೆ ತಂಟೆ ತಕರಾರು ಮಾಡಬಾರದು ಎಂದು ಹೇಳಿದ್ದಕ್ಕೆ ಚಲವಾದಿ ಜಾತಿಯ ಯಜಮಾನನ ಮಗನಾದ ಬುದ್ಧಿವಂತ ಪೂಸಯ್ಯ ಎನ್ನುವರು. ಮಹಾಸಭೆಯವರೆಗೂ ರಾಜಶ್ರೀ ನರಪತಿ ದೊರೆಗಳಿಗು ಸಾಷ್ಟಂಗವಂ ಮಾಡಿ. ಕೇಳಿ ಕೊಂಡಿದ್ದು ಏನೆಂದರೆ ಮಹಾಸ್ವಾಮಿಗಳೇ ಈ ಮಣೆಗಾರರು, ಗ್ರಾಮದೇವತೆಯ ಮುಂದೆ ಕೋಣವನ್ನು ಕಡಿದು ಬಲಭಾಗಕ್ಕೆ ಕೆಡುವುತ್ತಾರೆ ಮತ್ತು ಬಲಗಾಲು ಕೊಯ್ದು ಪಾದಗಟ್ಟೆಯನ್ನು ಬಾಯಿಯಲ್ಲಿ ಇಡುತ್ತಾರೆ. ಬಲಭಾಗ ನಮ್ಮದಾಗಿದೆ. ಆದ್ದರಿಂದ ಅವರು ಬಲ ಭಾಗಕ್ಕೆ ಕಡೆಯಬಾರದು. ಬಲಗಾಲು ಕೊಯ್ಯಬಾರದು. ಆದ್ದರಿಂದ ಅದು ನಮಗೆ ಅವಮಾನ ಆಗುತ್ತದೆ. ಅವರು ಎಡಭಾಗಕ್ಕೆ ಕೆಡುವಬಹುದು. ಎಡಗಾಲು ಕೊಯ್ಯಬಹುದು. ನಮಗೆ ಕೋಣವನ್ನು ಹಿಡಿಯಲು ರಂಗೆ, ಕುಂಬ, ಇತ್ಯಾದಿ ಕಾರ್ಯಕ್ಕೆ ಸೇರಿಸುವಂತ ಅಪ್ಪಣೆ ಮಾಡಬೇಂಕದು ಚಲವಾದಿ ಪೂಸಯ್ಯನು ಕೇಳಿಕೊಂಡನು. ಅದಕ್ಕೆ ಮಹನೀಯರು ಆಲೋಚನೆಯಂ ಮಾಡಿ ಅಯ್ಯಾ ಚಲವಾದಿ ಪೂಸಯ್ಯನೆ ಮಾದಿಗರೆನುತಲು ಮಾತಂಗ ಎಂಬ ಶಬ್ದವು ಬ್ರಹ್ಮಾಂಡ ಪುರಾಣದಲ್ಲಿ ೧೧೬ನೆ ಗ್ರಂಥದಿಂದ ಹಿಡಿದು ೧೧೨ನೆ ಗ್ರಂಥದವರೆಗೂ ಇದೆ.

ಶ್ಲೋಕಂ: "ರುದ್ರಸ್ಯೇ ಬದ್ರಹುನಂ ಅಜಮಂ ನಾಳೇಂದ್ರ
ಬಹುನಂ ಇರಣ್ಯರೆವ ಹರಿಣಂ ಧೀರಂ
ಚರಲಿ ಭಹುನ ಚಂದ್ರ ಬಾಹು ನಶ್ಯನಮಃ"

ಮಣೆಗಾರರಿಗೆ ನವಲಕ್ಷ್ಮಿಯರು ಮೂಲ ದೇವತೆಗಳು ಅವರ ನಾಮಗಳು, ಆದಿ ನಾರಾಯಣ, ಬೃಂದವಾಣಿ, ಲೋಕಮಹಾತಾಯಿ, ಶಶಿ ಸಹೋದರಿ, ಜಾನಕಿ ಕುಮಾರಿ ಹೀಗೆ ೯ ಮಂದಿ ಲಕ್ಷ್ಮಿಯರು. ೯ ಮಂದಿ ಚಾರುಲಕ್ಷ್ಮಿಯರು ಹುಟ್ಟಿದರು. ಅವರ ಮಕ್ಕಳು ಶ್ರೀ ಮಹಾಲಕ್ಷ್ಮಿ, ವಿಜಯಲಕ್ಷ್ಮಿ, ಕೀರ್ತಿಲಕ್ಷ್ಮಿ, ದಾರಿದ್ರ್ಯಲಕ್ಷ್ಮಿ, ಮಾರಿಲಕ್ಷ್ಮಿ, ಗ್ರಾಮಲಕ್ಷ್ಮಿ ಇಂತಿ ೧೮ ಮಂದಿ ಲಕ್ಷ್ಮಿಯರು ಮಾಣೆಗಾರರ ಮೂಲ ದೇವತೆಗಳು ಎಂದು ಹೇಳಿ ಇವರು ಗ್ರಾಮದೇವತೆಯ ಮುಂದೆ ಕಡಿಯುವ ಕೋಣವನ್ನು ಕಡಿಯ ಬಾರದು. ಗೋಸಂಗಿಯವರೇ ಕಡಿಯತಕ್ಕದ್ದು. ಬಲಭಾಗಕ್ಕೆ ಕೆಡವತಕ್ಕದ್ದು, ಬಲಗಾಲು ಕೊಯ್ದು ಬಾಯಿಯಲ್ಲಿ ಪಾದಗಟ್ಟೆ ಇಡುವುದು, ಹೊಟ್ಟೆಯಲ್ಲಿನ ಪೊರೆ ತೆಗೆದು ತಲೆಯ ಮೇಲೆ ಜ್ಯೋತಿ ಇಡುವುದು. ಅಂಥ ಕಾಲದಲ್ಲಿ ಬಲಗೈಯವರು ಅರೆಗಳ ಮೇಲೆ ಕೆಂಪು ಜೆಲ್ಲಿ ಹಾಕಕೂಡದು. ಕೆಂಪು, ಕರಿದು ಮಣೆಗಾರರಿಗೆ ಸಲ್ಲತಕ್ಕದ್ದು. ಹಳದಿ, ಬಿಳಿ ಬಲಗೈಯವರಿಗೆ ಸಲ್ಲತಕ್ಕದ್ದು. ಇಂತಿ ನೀವುಗಳು ಅನ್ಯೂನ್ಯವಾಗಿರಬೇಕೆಂದು

